# ಮಾನಸಿ

ತಿಂಗಳ ಪತ್ರಿಕೆ ಸೆಪ್ಟೆಂಬರ್ - ಅಕ್ಟೋಬರ್ : 1996




* ಸೌಂದರ್ಯ ನನ್ನ ಅನುಭವದಲ್ಲಿ ಹಾಗೂ ಕಲ್ಪನೆಯಲ್ಲಿ
* ವಿಮೋಚನೆಗೆ ಎಡಮಾಡಿಕೊಡುವುದೇ ಸೌಂದರ್ಯ
* ಸೌಂದರ್ಯ ಹೆಂಗಸರಿಗೆ ಒಂದು ಪವರ್
* ಸೌಂದರ್ಯವು ಕೋಟ್ಯಾಂತರ ಬಿಲಿಯನ್‌ಗಳ ಉದ್ಯಮ
* ಮಾರುಕಟ್ಟೆ ಆಸಕ್ತಿಯ ವಿಶ್ವಸುಂದರಿ ಸ್ಪರ್ಧೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 11 ಸಂಚಿಕೆ : 8-9

ಸೆಪ್ಟೆಂಬರ್ - ಅಕ್ಟೋಬರ್ : 1996





ವಿಳಾಸ :

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **25-00** ರೂ.

ಆಜೀವ ಚಂದಾ **300-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ....**

# ಸೌಂದರ್ಯ ನನ್ನ ಅನುಭವದಲ್ಲಿ ಹಾಗೂ ಕಲ್ಪನೆಯಲ್ಲಿ

*ಇಂದಿನ ಸಂಸ್ಕೃತಿಯ ಸಂದರ್ಭದಲ್ಲಿ ಇರುವ ಸೌಂದರ್ಯದ ಕಲ್ಪನೆಯಿಂದಾಗಿ ಇದು ಕೇವಲ ಬಂಡವಾಳಶಾಹಿಗಳ ಬಂಡವಾಳವಾಗಿ ಮಾತ್ರವಲ್ಲ, ಖಾಸಗಿ ಜೀವನದಲ್ಲೂ ಬಂಡವಾಳವಾಗಿಯೇ ಮುಖ್ಯ ಪಾತ್ರ ವಹಿಸುವುದನ್ನು ನಾವು ಕಾಣುತ್ತೇವೆ. ಹೀಗೆ ಸೌಂದರ್ಯ ಬಂಡವಾಳವಾಗಿ ಬಿಡುವ ಹಂತದಿಂದಾಗಿ ಹಲವಾರು ಜನ ವಿಭಿನ್ನ ರೀತಿಯ 'ಕಾಂಪ್ಲೆಕ್ಸ್'ಗಳನ್ನು ತಮ್ಮ ಜೀವನದ ಮುಖ್ಯವಾದ ಘಟ್ಟಗಳಲ್ಲಿ ಹೊಂದಿರುವುದನ್ನು ನಾವು ಕಾಣಬಹುದು. ಸೌಂದರ್ಯದ ಬಗೆಗಿನ ಕೆಲವರ ಇಂತಹ ಅನುಭವಗಳನ್ನು/ಕಲ್ಪನೆಗಳನ್ನು ದಾಖಲಿಸಲು ಇಲ್ಲಿ ಪ್ರಯತ್ನಿಸಲಾಗಿದೆ.*

*ಸಂ. ಮ.*

## ಸೌಂದರ್ಯವನ್ನು ಸುಳ್ಳು ನಗೆ, ಮೇಕಪ್ ಮೆತ್ತಿದ ಮುಖಗಳಲ್ಲಿ ಕಂಡಿಲ್ಲ

*ಶ್ರೀಮತಿ ಶಶಿ ದೇಶಪಾಂಡೆ*









ಶ್ರೀಮತಿ ಶಶಿ ದೇಶಪಾಂಡೆಯವರು ಇಂಗ್ಲೀಷ್ ಭಾಷೆಯಲ್ಲಿ ಬರೆಯುವ ಭಾರತೀಯ ಬರಹಗಾರ್ತಿಯರಲ್ಲಿ ಉತ್ತಮ ಲೇಖಕಿ. ಸಣ್ಣ ಕಥೆಗಳು, ಕಾದಂಬರಿಗಳನ್ನು ಬರೆದಿರುವ ಅವರು ವೈಯುಕ್ತಿಕವಾಗಿ ತಾನೊಬ್ಬಳು ಸ್ತ್ರೀವಾದಿ ಎಂದು ಯಾವ ಭಯವಿಲ್ಲದೆ ಹೇಳುತ್ತಾರೆ. ಸ್ತ್ರೀ ಸಂವೇದನೆಯ ಅಭಿವ್ಯಕ್ತಿಗೆ ಸಾಹಿತ್ಯ ಒಂದು ಮಾಧ್ಯಮ ಎನ್ನುವ ಅವರು ವೃತ್ತಿಯಲ್ಲಿ ತಾನೊಬ್ಬಳು Full time ಬರಹಗಾರ್ತಿ ಎನ್ನುತ್ತಾರೆ. ಹೆಣ್ಣಿನ ಬದುಕಿನ ಸೂಕ್ಷ್ಮ ಸಂಕೀರ್ಣತೆಗಳನ್ನು, ಅಷ್ಟೇ ಸೂಕ್ಷ್ಮವಾಗಿಯೂ, ತೀವ್ರವಾಗಿಯೂ ಬರೆಯಬಲ್ಲರು.

ಸೌಂದರ್ಯದ ಕಲ್ಪನೆಯ ಬಗ್ಗೆ ಶ್ರೀಮತಿ ಶಶಿ ದೇಶಪಾಂಡೆಯವರು ತಮ್ಮ ಅಭಿಪ್ರಾಯವನ್ನು ಮಾನಸದೊಂದಿಗೆ ಹಂಚಿಕೊಂಡಿದ್ದಾರೆ.

ನಾನು ಶಾಲೆಯಲ್ಲಿ ಓದುತ್ತಿದ್ದ ಸಮಯ. ನನಗಿನ್ನೂ ಜ್ಞಾಪಕವಿದೆ. ನಮ್ಮ ಡ್ರಾಯಿಂಗ್ ಟೀಚರ್ (ಪುರುಷ) ಹೇಳುತ್ತಿದ್ದರು, ಹೆಣ್ಣಿನ ಸರಿಯಾದ ಮುಖ ಮೂರು ಸಮಭಾಗಗಳನ್ನು ಹೊಂದಿದೆ. ಒಂದು ಹಣೆ, ಎರಡನೆಯದು ಮೂಗು, ಮೂರನೆಯದು ಗಲ್ಲ ಹಾಗೂ ಮೂಗಿನ ನಡುವಿನ ಭಾಗ. ಅವರು ಹೇಳಿದ ಮೇಲೆ, ನಾವುಗಳು ಯಾವಾಗಲೂ

ಒಂದು ಸರಿಯಾದ ಅಳತೆ ಇಟ್ಟುಕೊಂಡೆ, ಮುಖವನ್ನು ಚಿತ್ರಿಸುತ್ತಿದ್ದೆವು. ನಮ್ಮ ಮುಖಗಳನ್ನು ಅಳತೆ ಮಾಡಿಕೊಂಡಾಗ ನಾವು ಹಾಗಿಲ್ಲವಲ್ಲ ಎನಿಸುತ್ತಿತ್ತು. ಕಾರಣ ನಮಗಾರಿಗೂ ಸುಂದರಿ ಎನಿಸುವ ಆ ಅಳತೆ ಮುಖ ಇರಲಿಲ್ಲ. ನಾವು ಬರೆಯುತ್ತಿದ್ದ ಚಿತ್ರ ಕೂಡ ಸುಂದರವಾಗಿರುವುದಿರಲಿ, ಕೊಂಚ ಬೀಭತ್ಸವೇ ಆಗಿತ್ತೆಂದು ನಮಗ್ಯಾಕೆ ಅನ್ನಿಸಿರಲಿಲ್ಲ? ಹೆಂಗಸರು ಯಾವಾಗಲೂ, ಬೇರೆಯವರು (ಸಾಮಾನ್ಯವಾಗಿ ಗಂಡಸರ) ತೀರ್ಮಾನಿಸಿರುವ, ಒಂದು ನಿರ್ದಿಷ್ಟ ಪ್ರಮಾಣದ ಸೌಂದರ್ಯವನ್ನು ಪಡೆಯಲು ಹೆಣಗುತ್ತಾರೆ ಎಂಬ ಅರಿವು ಮೂಡಲು ಯಾಕೆ ಇಷ್ಟು ವರ್ಷಗಳೇ ಬೇಕಾಯ್ತು?

ಇದೇ ರೀತಿ ಸಾಹಿತ್ಯದಲ್ಲೂ ಕೂಡ ಕವಿಗಳು, ಬರಹಗಾರರು ರಾಶಿಗಟ್ಟಲೆ ಹೆಣ್ಣಿನ ಸೌಂದರ್ಯದ ಬಗ್ಗೆ ಬರೆದಿದ್ದಾರೆ. ಹಾಗೆ ಬರೆದವರೆಲ್ಲ ಗಂಡಸರೆ! ಆದ್ದರಿಂದ ಆದರ್ಶ ಸುಂದರಿಯರೆಂದರೆ, ಗಂಡಸರಿಗೆ ಇಷ್ಟವಾಗುವಂತೆ ಇರುವ ಸ್ತ್ರೀಯರು. ಸಂಸ್ಕೃತ ಕಾವ್ಯದ 'ಗಜಗಮನೆ' ಬಾಳೆದಿಂಡಿನ ತೊಡೆಯ ಹೆಂಗಸರು ಇದಕ್ಕೆ ತಕ್ಕ ಉದಾಹರಣೆ. ಬೇಲೂರಿನ ಸುಂದರಿಯರ ಸಾಲನ್ನು ನೋಡುವಾಗ ಇದು ಸುಳ್ಳಲ್ಲವೆ ಎಂಬ ವಿಚಾರ ತಲೆಯಲ್ಲಿ ಬಂತು. ಹೆಂಗಸರು ನಿಜಕ್ಕೂ ಆ ರೀತಿ ಇರಲು ಸಾಧ್ಯವೆ? ಇಂದಿನ ಆದರ್ಶವೆಂದರೆ 34-24-34ರ ಅಳತೆಯ, ಸಣ್ಣ ನೀಳ ಕಾಲುಗಳ, ಎತ್ತರಿಸಿದ ಸ್ತನಗಳ ಹಾಗು 'ಸಿಂಥೆಟಿಕ್' ಮುಗುಳ್ನಗೆ ಬೀರುವ ಸಮ ಪ್ರಮಾಣದ ಹಲ್ಲುಗಳುಳ್ಳ ಸುಂದರಿ. ಆ ನಿರ್ದಿಷ್ಟ ಪ್ರಮಾಣದ ನಿತಂಬಗಳನ್ನು ಪಡೆಯದೆ ಹುಟ್ಟಿದ ಹೆಂಗಸರು, ಉಪವಾಸ ಮಾಡಿ ನರಳುತ್ತಾ, ನಿರ್ದಿಷ್ಟ ಪ್ರಮಾಣವನ್ನು ಪಡೆಯಲು ಹೆಣಗುತ್ತಾರೆ. ದೊಡ್ಡ ಗಾತ್ರದ ಸ್ತನಗಳಿಲ್ಲದ ಹೆಂಗಸರು ಸಿಲಿಕಾನ್ ಅಳವಡಿಸಿಕೊಳ್ಳುತ್ತಾರೆ. ಸಿಲಿಕಾನ್ ಅಳವಡಿಕೆ ಎಂದರೆ ಜೆಲ್ಲಿ, ಗಟ್ಟಿ ದ್ರವದಂತ ವಸ್ತು ತುಂಬಿದ ಪ್ಲಾಸ್ಟಿಕ್ ಚೀಲಗಳನ್ನು ಸ್ತನಗಳ ಅಡಿಯ ಭಾಗವನ್ನು ಕೊಯ್ದು ತೂರಿಸುತ್ತಾರೆ. ಆ ಚೀಲವು ಸ್ತನಗಳ ಒಳಗಿನ ಕೊಬ್ಬಿನ ಜೀವಕೋಶಗಳನ್ನು ಮುಂದೆ ತಳ್ಳುತ್ತದೆ. ಯಾವುದೇ ಕಾರಣದಿಂದ ಚೀಲವೇನಾದರೂ ಒಡೆದರೆ ಜೆಲ್ಲಿ ಎಲ್ಲ ಕಡೆ ಪಸರಿಸುವುದು. ಇದರಿಂದ ಕ್ಯಾನ್ಸರ್‌ನಂತಹ ಮಾರಕ ರೋಗ ಬರುವ ಸಾಧ್ಯತೆ ಇರುವುದಲ್ಲದೆ, ಹೆಚ್ಚು ನೋವುಂಟು ಮಾಡುತ್ತದೆ. ಹೆಣ್ಣಿನ ಈ ಮೂರ್ಖತನದ ಪರಮಾವಧಿ ದುರಂತವೇ ಸರಿ. ಸ್ತನಗಳು ಇಂತಿಷ್ಟೇ ಗಾತ್ರದಲ್ಲಿದ್ದರೆ, ಗಂಡಸರು ಅದರ ಗಾತ್ರವನ್ನೂ, ನಡುವಿನ ಸೀಳನ್ನೂ ನೋಡಿ ಆನಂದಿಸುತ್ತಾರೆಂಬ ಕಾರಣಕ್ಕೆ ನಮ್ಮ ಸ್ತನಗಳು ಇಂತಿಷ್ಟೇ ಗಾತ್ರದಲ್ಲಿ ಏಕಿರಬೇಕು? ದೇಹದ ಇತರ ಅಂಗಾಂಗಗಳಂತೆ, ಸ್ತನವು ಹೆಂಗಸರಿಗೆ ಒಂದು ಅಂಗವಷ್ಟೆ. ಜನನ ಕಾರ್ಯದಲ್ಲಷ್ಟೆ ಅವು ಮುಖ್ಯ. ಕಾರಣ ಆ ಸಮಯದಲ್ಲಿ ಅವು ಜೀವ ಕಾರಂಜಿ. ಗಾತ್ರಕ್ಕೂ ಹಾಲು ಉತ್ಪಾದನೆಗೂ ಯಾವ ಸಂಬಂಧವೂ ಇಲ್ಲ. ಇನ್ನು ಸಿಲಿಕಾನ್! ಅದರ ಪರಿಣಾಮದ ಬಗ್ಗೆ ಯೋಚಿಸಲು ನಡುಕವಾಗುವುದು.

ತಮ್ಮದೆ ಸೌಂದರ್ಯದ ಕಲ್ಪನೆಗಳನ್ನು ಮಹಿಳೆಯರು ಸಮರ್ಥಿಸಿಕೊಳ್ಳುವುದು ಯಾವಾಗ? ನಮ್ಮದೆ ಸೌಂದರ್ಯ ಕಲ್ಪನೆಗಳನ್ನು ಹೊಂದಿದಾಗಷ್ಟೇ ನಮ್ಮೊಂದಿಗೆ ನಾವು ಆರಾಮವಾಗಿರಲು ಸಾಧ್ಯ. ಆಗಲೇ ನಾವು ನಮ್ಮ ಮೂಗು ಮೊಂಡೆಂದೂ, ಕೂದಲು ಗುಂಗುರೆಂದೂ, ಕಾಲುಗಳು ದಪ್ಪ ಮೋಟೋ ಎಂದು, ನಿತಂಬಗಳು ತುಂಬಾ ದೊಡ್ಡವೆಂದು, ಬಣ್ಣ ಕಪ್ಪೆಂದೂ ಪಡುವ ಯಾತನೆ ಕೊನೆಯಾಗಬಹುದು. ರಾಜಕೀಯ ಸ್ಪಷ್ಟತೆ ಇರುವಂತಹ ಈಗಿನ ಕಾಲದಲ್ಲಿ, ಬೆಳ್ಳಗಿರುವುದಷ್ಟೆ ಸುಂದರವೆಂದು ಹೆಚ್ಚಿನ ಜನ ಹೇಳಲಾರರು. ಆದರೆ ಆ ರೀತಿ ಯೋಚನೆಗಳಂತೂ ಯಾವಾಗಲೂ ಇವೆ.

ನನ್ನ ಸೌಂದರ್ಯದ ಕಲ್ಪನೆ ಏನು? ಅದನ್ನು ಪಟ್ಟಿ ಮಾಡುವುದೊ, ದೃಢೀಕರಿಸುವುದೊ ನನಗೆ ಸಾಧ್ಯವಿಲ್ಲ. ಕಾರಣ ಸೌಂದರ್ಯ ಮನಸ್ಸಿನಲ್ಲಿ ಮಿಂಚಿನಂತೆ ಇಣುಕಿದೆ. ಅಥ್ಲೇಟ್‌ಗಳು ಓಡುವಾಗಿನ ಮೈಯಲ್ಲಿ ನೋಡಿದ್ದೇನೆ. ತಲೆಯ ಮೇಲೆ ಹೆಲ್ಮೆಟ್ ಹಾಕಿ, ದುಪ್ಪಟ್ಟವನ್ನೂ, ಸೆರಗನ್ನೂ ಸೊಂಟ (ಖಂಡಿತ 22" ಇಂಚಿನದಲ್ಲ)ದಲ್ಲಿ ಸಿಕ್ಕಿಸಿ ಸ್ಕೂಟರ್ ಮೇಲೆ ಭರ್ರ್ ಎಂದು ಸಾಗುವ ಮುಖಗಳಲ್ಲಿ ನೋಡಿದ್ದೇನೆ. ಧೈರ್ಯ, ಶಕ್ತಿ, ಸಿಟ್ಟಿನಲ್ಲಿ ಕಂಡಿದ್ದೇನೆ. ಈಗಲೂ ಇರುವ 'ಒಳ್ಳೆಯತನ'ದಲ್ಲಿ ಕಂಡಿದ್ದೇನೆ. ಉಪವಾಸ ಮಾಡಿ ಅನೊರೆಕ್ಸಿ ರೋಗ (ಊಟ ಬಿಟ್ಟು ಸೊರಗುವುದರಿಂದ ಬರುವ ಖಾಯಿಲೆ) ಬರಿಸಿಕೊಂಡ ಮೈಯಿನಲ್ಲಿ ನೋಡಿಲ್ಲ. ಸುಳ್ಳು ನಗೆ, ಮೇಕಪ್ ಮೆತ್ತಿದ ಮುಖದಲ್ಲಿ ಕಂಡಿಲ್ಲ. ನಾನೇನೂ ಅನನ್ಯಳಲ್ಲ. ಎಲ್ಲರೂ ಸ್ವಲ್ಪ ಯೋಚಿಸಿದರೆ ಸೌಂದರ್ಯದ ಅರಿವಾಗುವುದು. ಆ ಸೌಂದರ್ಯದ ಅರಿವಿಗೂ, ಉಡುಪು, ಮೇಕಪ್ ಇಂತಿಷ್ಟೇ ಅಳತೆಯ ಅಂಗಸೌಷ್ಠವಕ್ಕೂ ಯಾವ ಸಂಬಂಧವೂ ಇಲ್ಲ. ಈಗ ನಾವು ನೀಳಕಾಲಿನ, ದೊಡ್ಡಕಣ್ಣುಗಳ, ತುಂಟ ತುಟಿಗಳ, ಎತ್ತರಿಸಿದ ಸ್ತನಗಳ, ಸಣ್ಣ ನಿತಂಬಗಳ ಪಾಶ್ಚಾತ್ಯ ಸೌಂದರ್ಯ ಮಾದರಿಯನ್ನು ಆಮದು ಮಾಡಿಕೊಂಡಿದ್ದೇವೆ. ನಮ್ಮದೇ ಸ್ವಂತ ಸೌಂದರ್ಯದ ಕಲ್ಪನೆಯ ಬಗ್ಗೆ ತಿಳಿದುಕೊಳ್ಳುವ ಅವಶ್ಯಕತೆಯಿದೆ. ಈ ಪ್ರಯತ್ನ ನಡೆದರೆ, ಮುಂದೆ ನಮ್ಮ ಹೆಣ್ಣು ಮಕ್ಕಳು, ಬೇರೆ ಯಾರೊ ಹೇರುವ ಸೌಂದರ್ಯದ ಕಲ್ಪನೆಯಿಂದ ಬಿಡುಗಡೆ ಪಡೆಯಬಹುದು.

●

# ವಿಮೋಚನೆಗೆ ಎಡಮಾಡಿಕೊಡುವುದೇ ಸೌಂದರ್ಯ

ಹಡಪದ್

ಶ್ರೀ ಆರ್. ಎಂ. ಹಡಪದ್ ಅವರು ರಾಷ್ಟ್ರೀಯ, ಅಂತರ ರಾಷ್ಟ್ರೀಯ ಖ್ಯಾತಿಯ ಕಲಾವಿದರು ಅಲ್ಲದೆ ಆದರ್ಶ ಅಧ್ಯಾಪಕ. ಕೆನ್ ಕಲಾಶಾಲೆಯನ್ನು ಪ್ರಾರಂಭಿಸಿ ನಡೆಸಿದವರು. ತಮ್ಮ ಸುತ್ತಲಿನ ಸಾಮಾಜಿಕ, ರಾಜಕೀಯ ಘಟನೆಗಳ ಬಗ್ಗೆ ಜಡವಾಗಿರುವ ಪ್ರವೃತ್ತಿ ಅವರದಲ್ಲ. ಆ ಬಗ್ಗೆ ತಮ್ಮದೇ ನಿಲುವನ್ನು ಹೊಂದಿರುವುದಲ್ಲದೆ ತಮ್ಮದೇ ರೀತಿಯಲ್ಲಿ ಸ್ಪಂದಿಸುತ್ತ ಬಂದಿದ್ದಾರೆ. ಇವರು ಕಲಾವಿದರಾಗಿ ಸೌಂದರ್ಯದ ಕಲ್ಪನೆಯ ಬಗ್ಗೆ ತಮ್ಮ ಅನಿಸಿಕೆಗಳನ್ನು ಮಾನಸದೊಂದಿಗೆ ಹಂಚಿಕೊಂಡಿದ್ದಾರೆ.

ಎಲ್ಲರಿಗೂ ಸೌಂದರ್ಯದ ಕಲ್ಪನೆ ಇದೆ. ಆದರೆ ಇವತ್ತಿನ ಸ್ಥಿತಿಯಲ್ಲಿ ಆ ಕಲ್ಪನೆಗಳು ಕಮರಿ ಹೋಗುತ್ತಿವೆ. ಪ್ರಾದೇಶಿಕತೆಯ ಜಾಗದಲ್ಲಿ ಇವತ್ತು ಜಾಗತಿಕ ಸಂಸ್ಕೃತಿ ಉತ್ಪನ್ನ ಆಗಿದೆ. ಯಾವುದು ಅತಿ ಪ್ರಭಾವಿತವೋ ಅದು ಮೇಲುಗೈ ಸಾಧಿಸುತ್ತಿದೆ. ಕಣ್ಣು ಕುಕ್ಕುವಂತಾ, ಹಣವೇ ಪ್ರಧಾನವಾದಂತದ್ದು ಪ್ರಾಬಲ್ಯ ಸಾಧಿಸುತ್ತಿದೆ. ಆದರೂ ನಾವು ಬಲವಂತವಾಗಿ ಒಗ್ಗಿಸಿಕೊಳ್ಳುತ್ತಿದ್ದೇವೆ. ಈ ಸೌಂದರ್ಯ ಸ್ಪರ್ಧೆ ಅನ್ನುವುದು ಒಂದು ರಾಜಕೀಯ. ಭಾರತದಂತಾ ಬಡ ದೇಶದಲ್ಲಿ 80% ಜನ ಅನ್ನ, ನೌಕರಿ ಇಲ್ಲದಂತಿರುವಾಗ, ಶ್ರೀಮಂತರ ಅಡಿಯಾಳಾಗಿರೋ ಆಳೋ ವರ್ಗ, ಉಡಲು ಬಟ್ಟೆಯಿಲ್ಲದೆ ಬೆತ್ತಲಾಗಿರೋವರನ್ನ ನೋಡಲು ಒಪ್ಪದೆ ಸ್ಪರ್ಧೆಯಲ್ಲಿ ಬತ್ತಲಾಗಿಸೋ ಕೆಲಸಾನ ಮಾಡ್ತಾ ಇದೆ.

ಸೌಂದರ್ಯ ಅನ್ನೋದನ್ನ ಜೀವನಕ್ಕೆ ಸಂಬಂಧಿಸಿ ನೋಡುವ ಅಭಿರುಚಿ ಮಾಯವಾಗುತ್ತಿದೆ. ಸಂಗೀತ, ಚಿತ್ರ, ಸಾಹಿತ್ಯ ಎಷ್ಟು ಮಂದಿಗೆ ತಿಳಿಯುತ್ತೆ? ದುಡ್ಡಿರೋ ಜನ, ತಾವೇ ಉತ್ಕೃಷ್ಟ ಜನಾಂಗವೆಂಬ ಭ್ರಮೆಯಲ್ಲಿರೋ ಜನ ವಿಶ್ವಸುಂದರಿಯನ್ನ ಆರಿಸ್ತಾರೆ. ಅವರು ಸುಂದರಿಯರೇ? ಎಲ್ಲ ಅವರ ಮೋಜು ಅಷ್ಟೆ.

ಬದುಕಿನ ತುಂಬಾ ಸೌಂದರ್ಯ ಇದೆ. ಅದನ್ನ ನೋಡುವುದನ್ನ ನಾವು ಕಲಿಯಬೇಕು. ನೀವು ಯಾವುದನ್ನ ಒಪ್ಪಿಕೋತೀರೋ ಅದೇ ಸೌಂದರ್ಯ. ಒತ್ತಾಯವಾಗಿ ಹೇರಲ್ಪಟ್ಟಿರೋದು ಕುರೂಪ. ಯಾವುದು ಸ್ವಾಭಾವಿಕ ವಾದದ್ದೋ, ಯಾವುದು ಸತ್ಯವಾದದ್ದೋ ಅದು ಸೌಂದರ್ಯ. ನಾನು ನಂಬುವಂತದ್ದು, ತೃಪ್ತಿಕೊಡುವಂತದ್ದು ಸೌಂದರ್ಯ, ನೋಡಿ, ಹಿಂದೆಲ್ಲ ಈಗ ನೀವು ಹಾಕುವ ಚೂಡಿದಾರನ್ನು ಮುಸ್ಲಿಮರ ವೇಶ ಎಂದು ಹಳಿಯುತ್ತಿದ್ದರು. ಈಗ, ನೀವು ಹುಡುಗಿಯರು ಅದೇ ತುಂಬಾ ಆರಾಮವಾಗಿರೋ ಉಡುಪು ಅಂತ ಬಳಸುತ್ತೀರಿ. ಹಾಗೆ, ನಮಗೆ ಆರಾಮವೆನಿಸುವುದೂ ಸುಂದರವಾಗಿರುತ್ತದೆ. ನಾವು ಅನೇಕ ಸಲ ಅಸತ್ಯವಾದ ಸೌಂದರ್ಯವನ್ನು ಸೌಂಧರ್ಯ ಎಂದು ನಂಬಿರುತ್ತೇವೆ. ಈ ವಿಶ್ವಸುಂದರಿಯನ್ನ ಬಹುಪಾಲು ಜನ ಹಾಗೆಯೇ ಒಪ್ಪಿ ಕೊಂಡಿದ್ದಾರೆ. ಆದರೆ ನನ್ನ ದೃಷ್ಟಿಯಲ್ಲಿ ನಮ್ಮ ವಿಮೋಚನೆಗೆ ಯಾವುದು ಹಾದಿ ಮಾಡಿಕೊಡುತ್ತದೋ ಅದೇ ಸೌಂದರ್ಯ.

ಪುರಾಣಗಳ ಕಾಲದಿಂದಲೂ ನಮ್ಮಲ್ಲಿ ಹೆಣ್ಣಿನ ಸೌಂದರ್ಯದ ಬಗೆಗಿನ ಮಿಥ್ ಇದ್ದೇ ಇದೆ. ಬಿಳಿ ಬಣ್ಣ, ಚೂಪು ಮೂಗು ಇತ್ಯಾದಿಗಳು ಸೌಂದರ್ಯದ ದ್ಯೋತಕ. ಕಾಳಿದಾಸನ ಹೆಣ್ಣಿನ ವರ್ಣನೆ ಎಷ್ಟು ಅಸಮಂಜಸ. 'ಶಬರಶಂಕರ ವಿಲಾಸ'ದಲ್ಲಿ ಪಾರ್ವತಿಯ ಒಂದೊಂದು ಅಂಗಗಳನ್ನ ಎಷ್ಟೊಂದು Obscene ಆಗಿ ವಿವರಿಸುತ್ತಾನೆ. ಇದನ್ನೆಲ್ಲಾ ಭಕ್ತಿ ಪ್ರಧಾನ ಎಂದು ಹೇಳಿಬಿಡುತ್ತಿದ್ದರು. ನಮ್ಮ ಹೆಂಗಸರು ಇದನ್ನ ಎಷ್ಟು ನಿರಾಕರಿಸಿದರೋ, ಬೈದರೋ ಗೊತ್ತಿಲ್ಲ. ಈಗ ಅಂತರರಾಷ್ಟ್ರೀಯ norms ತರಲು ಪ್ರಯತ್ನಿಸುತ್ತಿದ್ದಾರೆ. ಹೆಣ್ಣಿನ ಸೌಂದರ್ಯಕ್ಕೆ. ಇದನ್ನ ನಮ್ಮ ಹೆಂಗಸರು ಖಂಡಿತಾ ನಿರಾಕರಿಸಬೇಕು. ಇದಕ್ಕೆ ಬೇಕಾದ ಶಿಕ್ಷಣ ಅಗತ್ಯ. ಅರಿವು ಮೂಡುವುದು ಉತ್ತಮ ಶಿಕ್ಷಣದಿಂದ.

●

# ಸೌಂದರ್ಯ ಹೆಂಗಸರಿಗೆ ಒಂದು ಪವರ್

*ಸರಸ್ವತಿ*

ಸೌಂದರ್ಯ ಅನ್ನೋದು ನನ್ನ ಕಾಡೋಕೆ ಶುರುವಾದದ್ದು ಶಾಲೆಯ ಕೊನೆ ಮೂರು ವರ್ಷಗಳಲ್ಲಿ ಹಾಗು ಕಾಲೇಜಿನ ದಿನಗಳಲ್ಲಿ. ಮಾಮೂಲಿ ಶಾಲೆಯನ್ನು ಬಿಟ್ಟು ಪ್ರತಿಷ್ಠಿತ ಶಾಲೆ, ಕಾಲೇಜು ಸೇರಿದಾಗಲೆ ಹೆಚ್ಚಾಗಿದ್ದು! ಶಾಲೆಯಲ್ಲಿ ಒಳಗೊಳಗೆ ಕಾಡುತ್ತಿದ್ದುದು, ಕಾಲೇಜಿನಲ್ಲಿ ತೀವ್ರವಾಗಿತ್ತು. ನಿಧಾನವಾಗಿ ಅನಿಸತೊಡಗಿತ್ತು.... ನಾನು ಸುಂದರಿಯಲ್ಲ, ಸುಂದರಿಗಿರಬೇಕಾದ ಚೂಪು ಮೂಗು, ಪುಟ್ಟ ಬಾಯಿಯಾಗಲಿ, ಮುತ್ತಿನಂಥ ಹಲ್ಲುಗಳಾಗಲಿ, ಬೆಳ್ಳನೆ ಚರ್ಮವಾಗಲಿ ನನಗಿಲ್ಲ ಎನ್ನುವುದು ಅರ್ಥವಾಗತೊಡಗಿತ್ತು! ನಾನು ಸುಂದರಿಯಲ್ಲ ಅನ್ನುವುದು ಹುಟ್ಟಿದಾಗಲೆ ಇತ್ಯರ್ಥವಾಗಿದ್ದು, ಬೆಳೆಯುತ್ತಾ, ಬೆಳೆಯುತ್ತಾ ಜನರ ಮಾತುಗಳಿಂದ Confirm ಆಗುತ್ತಾ ಹೋಯಿತು. ಮಟ್ರು ಮೂಗಿ, ಉಬ್ಬಲ್ಲಿ, ಕರ್ರಿ - ಇವೆಲ್ಲ ಶಬ್ದಗಳು ಪದೇ ಪದೇ ಕಿವಿಗೆ ಬಿದ್ದು ಮನದೊಳಗೂ ಇಳಿದು, ನಾನೂ ನಂಬಿದೆ, ನಾನು ಕುರೂಪಿ ಅಂತಾ.

ಶಾಲೆಯಲ್ಲಿ ಜತೆಯವರು ನನ್ನ ಬಣ್ಣ, ಹಲ್ಲು, ಮೂಗು ಕುರಿತು ರೇಗಿಸಿದಾಗ ಹೊಟ್ಟೇಲಿ ಮುಳ್ಳು ಚುಚ್ಚೋದು. ಹಿಂದೆ ಬಂದು Skirt ಎತ್ತೋರು, ಎಷ್ಟೊಂದು ನೋವಾಗೋದು! ಸ್ಕೂಲ್ Group Photoನಲ್ಲಿ ನನ್ನ ಮುಖ ನೋಡಿ ಅದೆಷ್ಟು ನಕ್ಕಿದ್ರು. ಅದೇ ಕೊನೆ, ಮುಂದೆ ಎಷ್ಟೋ ವರ್ಷಗಳ ಕಾಲ Group Photoಗೆ ನಿಲ್ತಾನೇ ಇರ್ಲಿಲ್ಲ. ಯಾಕೆ ವಿರೋಧಿಸ್ತಾ ಇರ್ಲಿಲ್ವೋ ಗೊತ್ತಿಲ್ಲ, ಅಂತು ನನ್ನಂತಹವರು ಇರೋದೇ ರೇಗಿಸಿಕೊಳ್ಳೊಕೆ ಅಂತ ನಂಬಿಬಿಟ್ಟಿದ್ದೆ.

ಎಷ್ಟೋ ವರ್ಷಗಳು ನಾನು ಕುರೂಪಿ ಅನ್ನೋ ಭಾವನೆನೇ ಬಂದಿರ್ಲಿಲ್ಲ. ಅವ್ವ ಯಾವತ್ತೂ ನನ್ನ ಕುರೂಪಿ ಅಂತ ಹೇಳಿರ್ಲಿಲ್ಲ. ಆ ಭಾವನೆನೂ ಬೆಳೆಸಿರಲಿಲ್ಲ. ಅವಳು ನನ್ನ ಕುರೂಪಿ ಅಂತ ಅಂದ್ಕಂಡೆ ಇರ್ಲಿಲ್ಲ. ನೆಮ್ಮದಿ ತುಂಬಿ ಬೆಳಸಿದ್ದ ಅವ್ವನ ಮಾತ್‌ನ ಹೈಸ್ಕೂಲಿಗೆ ಬಂದ್ಮೇಲೆ ಯಾಕೆ ನಂಬೋದು ಬಿಟ್ಟೆ? ಹೈಸ್ಕೂಲಿನ ವಾತಾವರಣ, ಕಾಲೇಜಿನ ವಾತಾವರಣ ಹೆಚ್ಚು Influential ಆಗಿತ್ತು ಆಗ. ಚೆನ್ನಾಗಿದ್ರೆ ಎಲ್ಲರು ಗಮನಿಸೋರು, ಮನ್ನಣೆ ನೀಡೋರು. ಅದೂ ಚೆನ್ನಾಗಿರೋ ಹುಡ್ಗೀರು ಓದ್‌ನಲ್ಲೂ ಮುಂದ್ಲಿದ್ರಂತು ಆಯ್ತು ಅವಳು ದೇವತೇನೆ! ಉಳಿದೋರು ಸೇವಕರು. ಮಾತ್ ಕೇಳಿಲ್ಲ ಅಂದ್ರೆ - ಇರೋ ಮೂತಿ ನೋಡು, ಅಂದ್ರು ಎಷ್ಟ್ ಸೊಕ್ಕು ಅನ್ನೋ ಮಾತು ರೆಡಿಯಾಗಿರೋದು. ಒಟ್ನಲ್ಲಿ ಏನ್ ಮಾಡೋಕೂ ಚೆನ್ನಾಗಿರೊ ಒಂದು ಅರ್ಹತೆ ಬೇಕು! ಇವರ ಕಣ್ಣಿಗೆ ಚೆನ್ನಾಗಿಲ್ಲ ಅನ್ನೊ ಕಾರಣಕ್ಕೆ ಅಸಹನೆಗೆ, ಅಸಡ್ಡೆಗೆ ಗುರಿಯಾಗೋದನ್ನ Witness ಮಾಡ್ತಾ ಇದ್ದೆ, ನಾನೂ ಅನುಭವಿಸ್ತಾ ಇದ್ದೆ. ಒಳಗೊಳಗೆ ಕೀಳರಿಮೆ ಅನುಭವಿಸಿ Ugly ಆಗ್ತಾ ಇದ್ದೆ.

ಜನರು ಗಮನ ನೀಡೋ ಸುಂದರಿಯಲ್ಲ ಅಂದ್ಮೇಲೆ ಬೇರೇನಾದ್ರು ಆಗ್ಬೇಕು ಅಂತ ಮನಸು ಬಯಸೋದು. ಚೆನ್ನಾಗಿಲ್ಲ ಅಂದ್ರು ಹುಡುಗಿದ್ ಒಳ್ಳೇ ಗುಣ ಅಂತಾ ಎಲ್ರು ಅನ್ನೋರು. ಆಗೆಲ್ಲ, ಅದೊಂತರ ಯಾರೊ ಅಯ್ಯೊ ಪಾಪ ಅಂತ ಹಾಕೊ ಭಿಕ್ಷೆ ಅನ್ನೋದು. ನಾನ್ ಏನೂ ಅಂತ Prove ಮಾಡೋಕೆ ಏನಾದ್ರು Different ಆಗಿ ಮಾಡಿತೋರ್‍ಸ ಬೇಕು. ಈ ಸೌಂದರ್ಯಕ್ಕೆ Compensate ಆಗೋ ಅಂತಾದ್ದನ್ನು ಮಾಡ್‌ಬೇಕು ಅಂತಾ ಎಷ್ಟ್ ತೀವ್ರವಾಗಿ ಅನ್‌ಸೋದು. ಕಷ್ಟಪಟ್ಟು ಓದಬೇಕು, IAS, IPS ಮಾಡ್ಬೇಕು, ಈಜ್ ಕಲೀಬೇಕು, ಸಂಗೀತ ಕಲೀಬೇಕು (ಮಾದಿಗ್ರ ಹುಡ್ಗಿ ಸಂಗೀತ ಕಲ್ತಿರೋದನ್ನು ನೋಡಿ ಜನ ವಾಹ್ ಅನ್ಲಿ ಅಂತಾ) ಅಂತ ತುಂಬಾ ಶ್ರಮ ಹಾಕ್ದೆ. ಸೌಂದರ್ಯ ಹೆಂಗ್‌ಸ್ರಿಗೆ ಒಂದು Power, It's an asset! ನನಗೆ ಅದು ಇರ್ಲಿಲ್ಲ, ಅದಕ್ಕೆ ಇನ್ನೊಂದು Power ಪಡ್ಕೋಳೊ ಹುಚ್ಚು ಹಿಡೀತು. ಸಿನೀಮಾದಲ್ಲಿ ಲೇಡಿ ಪೋಲೀಸ್‌ಗಳು, ಅಧಿಕಾರಿಗಳು ದರ್ಪದಿಂದ ಅಧಿಕಾರ ಚಲಾಯಿಸೋದನ್ನ ನೋಡಿ ಎಷ್ಟು ಥ್ರಿಲ್ ಆಗ್ತಾ ಇದ್ದೆ. Pant, Shirt ಹಾಕ್ಕೊಂಡಾಗ ಒಂದ್ ರೀತಿ ಹಮ್ಮು! Thrilling, adventuristic ಕಥೆ ಪುಸ್ತಕಗಳ ಮುಂದೆ ಬೇರೆ ಪುಸ್ತಕಗಳು ತಗಡು ಅನ್ನೋದು. ಆದ್ರೆ ಎದೆಯ ಮಾತುಗಳನ್ನ ಪದವಾಗಿಸೋದು ನಂಗ್ ಬರ್‍ತಾ ಇತ್ತು, ತಲೆಯೊಳಗೆ ಕೊರೆಯೊ ಗೆರೆಗಳ್‌ನ ಹಾಳೆ ಮೇಲೆ ಮೂಡ್‌ಸೊಕ್ ನಂಗೆ ಆಗೋದು, ಶ್ರದ್ಧೆಯಿಂದ ದುಡಿಯೋ ಶಕ್ತಿ ಸಂಗ್ ಇತ್ತು, ಇದ್ಯಾವುದನ್ನು ಸೌಂದರ್ಯ ಅಂದ್ಕೋಳೋ ಸ್ಥಿತಿಯಲ್ಲೆ ನಾನಿರ್ಲಿಲ್ಲ. ಈ ಸ್ಥಿತಿ ತುಂಬಾ ದಿನ ಮುಂದ್‌ವರಿಲಿಲ್ಲ. ಆ ಸಮಯದಲ್ಲಿ ನಂಗೆ ಸಿಕ್ಕ ಮೇಷ್ಟ್ರು, ಮಹಿಳೆಯರ ಬಗ್ಗೆ ಬೇರೆನೇ

ರೀತಿ ಯೋಚಿಸೋದನ್ನ ಕಲಿಸಿದ ಸಂಘಟನೆ, ಅಲ್ಲಿ ಗೆಳತಿಯರು, ಸಣ್ಣತನವನ್ನು ಸದ್ದಿಲ್ಲದೆ ತೋರಿಸಿಕೊಟ್ಟ ಬೆಟ್ಟದಂತಾ ನನ್ನವ್ವ ಈಗ - ನನ್ನನ್ನು ಭ್ರಮೆಯಿಂದ ಈಚೆ ಎಳ್ದ್ರು. ಆ ಹುಚ್ಚು ಭ್ರಮೆ ಇಲ್ಲದೆ ನಿರಾಳ ಅನ್ನಿಸುತ್ತೆ, ಜಗತ್ತಿಗ್ Prove ಮಾಡಿತೋರ್ಸ್‌ಬೇಕು ಅನ್ನೋ Burden ಇಲ್ದೆ ಹಗ್ಗುರ ಅನ್ನುತ್ತೆ.

ಅವ್ವ ಹೇಳೋಳು "ಆ ಭಗ್‌ವಂತ್ ಕೊಟ್ಟಿರೋ ಮೈ ಅಂದಂಗೈತೋ ಅಂಗ್ ಇಟ್ಟುಕ್ಕೆ, ಅದ್ಕಾಕ್ ಇಲ್ಲುದ್ ಮಾಡ್ಕತಿರಾ, ಎಷ್ಟ್ ಮಾಡ್ ಕಂಡ್ರುವೆ ಅಷ್ಟೇಯಾ, ಮೂಗ್ ಮೂಗೆಯಾ, ಕಣ್ ಕಣ್ಣೆಯಾ, ಮೈ ಮುರ್ದು ದುಡಿಬೇಕು, ಶಿವಾ ನೀನ್ ಕೊಟ್ಟಿದ್ದಪ್ಪಾ ಅಂತಾ ಒಟ್ ತುಂಬಾ ಉಣ್‌ಬೇಕು. ಒಂದಿಡಿ ಎಚ್ಚಾಗುಂಡ್ರೆ, ಇನ್ನೊಬ್ರನ್ನ ಕಿತ್ಕಂಡಂಗೆ ತಿಳ್ಕಾ, ಅವನ್ ಕರ್‍ನಾಗ ತಲೆ ತಗ್ಗಿಸ್‌ಕಂಡ್ ನಡ್ಡ್‌ಬುಡ್‌ಬೇಕು". ಅವ್ವನ ಮಾತು ಉಸಿರಾಡೋ ಗಾಳಿ ಅಷ್ಟೆ ಸತ್ಯ ಅನ್ನುತ್ತೆ. ನನ್ನ ಇಂದಿನ ಸ್ಥಿತಿ ಧುತ್ ಅಂತ ಬಂದಿದ್ದಲ್ಲ. ಅದರ ಹಿಂದೆ ದೊಡ್ಡ ಗುದ್ದಾಟಾನೆ ಇದೆ, ನೋವು, ಅವಮಾನಗಳು, ಆತ್ಮೀಯರ ವಿಶ್ವಾಸ, ಹಾರೈಕೆ, ಎಲ್ಲಾ ಹುಚ್‌ತನಗಳನ್ನು ಸಹಿಸಿಕೊಳ್ಳೋ ನನ್ನಪ್ಪ, ಅಲ್ಲದ 'ಕಸ'ವನ್ನ ತೊಳೆದು ಹಾಕೊ ನನ್ನವ್ವ - ಎಲ್ಲವೂ ನಾನು ಕುರೂಪಿಯಲ್ಲ ಅನ್ನೋ ಭಾವನೆ ಹೋಗೋಕೆ ಕಾರಣ.

## ಸೌಂದರ್ಯ ಗುಣಕ್ಕೆ ಸಂಬಂಧಿಸಿದ್ದು, ಪ್ರಮಾಣಕ್ಕಲ್ಲ

*ಲಲಿತಾ*

ನನ್ನ ದೃಷ್ಟಿಯಲ್ಲಿ ಸೌಂದರ್ಯ ಎನ್ನುವುದು ಒಂದು ಬಗೆಯ ವ್ಯಕ್ತಿಗತವಾದ ಸಂಗತಿ, ಅನೇಕ ಸಂಕೀರ್ಣ ಅಂಶಗಳ ಭಾವ ಗ್ರಹಿಕೆ. ಸೌಂದರ್ಯದ ಕಲ್ಪನೆ ವ್ಯಕ್ತಿಯಿಂದ ವ್ಯಕ್ತಿಗೆ, ವರ್ಣದಿಂದ ವರ್ಣಕ್ಕೆ, ಸ್ಥಳದಿಂದ ಸ್ಥಳಕ್ಕೆ ಮತ್ತು ಕಾಲದಿಂದ ಕಾಲಕ್ಕೆ ಬದಲಾಗುವಂತದ್ದು. ಹೀಗಾಗಿ ಸೌಂದರ್ಯವೆನ್ನುವುದನ್ನು ಅಳೆಯುವ ನಿರ್ದಿಷ್ಟ ಅಳತೆಗೋಲಿರಲು ಸಾಧ್ಯವಿಲ್ಲ. ಪ್ರಕೃತಿಯನ್ನು ಪ್ರಶಂಸಿಸುವ ಜಾಯಮಾನ ಪರಿಸರದೊಂದಿಗಿನ ಸಂಬಂಧದಿಂದ ಅರಳುವಂತೆ ವ್ಯಕ್ತಿಯೊಬ್ಬರೊಡನೆಗಿನ ಮೆಚ್ಚುಗೆ, ಎಡರು-ತೊಡರುಗಳನ್ನು ಎದುರಿಸಿ ಹಾದು ಬಂದ ಮಾನವ ಸಂಬಂಧದಿಂದ ಬರುವಂತದ್ದು. ಇದರಲ್ಲಿ ದೈಹಿಕ ಅಂಶಗಳ ಪಾತ್ರವೇನೂ ಅಷ್ಟಾಗಿ ಇರುವುದಿಲ್ಲ. ಆದ್ದರಿಂದ ನನ್ನ ಮಟ್ಟಿಗೆ ಸೌಂದರ್ಯವೆನ್ನುವುದು ಹೊರ ವಿವರಗಳಿಗಿಂತ ಹೆಚ್ಚಾಗಿ ಒಳ ವಿವರಗಳಿಗೆ ಸಂಬಂಧಿಸಿದ್ದಾಗಿರುತ್ತದೆ. ಅದು ಗುಣಕ್ಕೆ ಸಂಬಂಧಿಸಿರುತ್ತದೆ, ಪ್ರಮಾಣಕ್ಕಲ್ಲ. ಅಂತರಾಳದ ಗುಣಗಳಾದ ಅನುರಾಗ, ಕಾಳಜಿ, ಅಪಾರ ಬಗೆಯ ಸಂವೇದನೆಗಳು ಮತ್ತು ಸ್ವತಂತ್ರ ಮತ್ತು ನ್ಯಾಯಗಳನ್ನು ಭಾವಿಸಿಕೊಳ್ಳುವ ಜಾಯಮಾನ ಇವೆಲ್ಲ ನನ್ನ ದೃಷ್ಟಿಯ ಸುಂದರ ವ್ಯಕ್ತಿಯಲ್ಲಿ ಸೇರಬೇಕಾಗಿರುವ ಅಂಶಗಳು. ಇವು ವಂಶಪರಂಪರೆ, ಜನಾಂಗ, ಜಾತಿ ಮತ್ತು ಭೂಗೋಳಿಕ ಅಂಶಗಳಿಗೆ ಸಂಬಂಧಿಸಿ ಆಕಸ್ಮಾತ್ತಾಗಿ ಉಂಟಾಗುವಂತವಕ್ಕಿಂತ ಭಿನ್ನವಾದವುಗಳು. ಇಲ್ಲಿ ಸ್ವ-ಪ್ರಯತ್ನ ಮತ್ತು ಶ್ರಮ ಕೂಡ ಮುಖ್ಯವಾಗುತ್ತದೆ. ಸೌಂದರ್ಯ ಅನ್ನುವುದು ಚರ್ಮದ ಅಥವಾ ಕಣ್ಣಿನ ಬಣ್ಣ, ಮೂಗು, ತುಟಿ ಅಥವಾ ನಿತಂಬಗಳ ಆಕಾರ ಇಲ್ಲವೇ ಮೇಲು ಮೇಲಿನ ಕೆಲ ಮಾಂಸದ ಪದರುಗಳ ಹೊದಿಕೆಗಳಿಗಿಂತ ಬಹಳ ಹೆಚ್ಚಿನದು ಮತ್ತು ಸೌಂದರ್ಯವನ್ನು ದೇಹಕ್ಕೆ ಇಳಿಸಿಬಿಡುವುದು ಖಂಡಿತವಾಗಿಯೂ ರಾಜಕೀಯವೇ ಎಂಧು ನನ್ನ ಭಾವನೆ.

ಈ ದೇಹ ಸುಂದರವೆಂದು ಕರೆಸಿಕೊಂಡು ಬಳಕೆಗೆ ಅನುವಾಗಬೇಕಾದರೆ ಎಲ್ಲ ಸಾಧ್ಯವಿರುವ ರೀತಿಯಲ್ಲಿ ಅದನ್ನು ಜತನ ಮಾಡಬೇಕು, ಸದಾಕಾಲ ಕಾಪಾಡಿಕೊಳ್ಳಬೇಕು. ಕೇವಲ ಕೆಲವರಿಗಷ್ಟೇ ಅನ್ವಯಿಸುವಂತಹ ಸೌಂದರ್ಯದ ಸ್ಟ್ಯಾಂಡರ್ಡ್ ಅನ್ನು ಹುಟ್ಟು ಹಾಕುವ ಮತ್ತು ಸೌಂದರ್ಯ ಸಾಧಕಗಳ ಬಳಕೆಯ ಮತ್ತು ಶಸ್ತ್ರಚಿಕಿತ್ಸೆಗಳ ಮೂಲಕ ಅದನ್ನ ಎಲ್ಲರೂ ತಲುಪುವ ಬಗ್ಗೆ ಕೆಲ ಮಾಧ್ಯಮಗಳು ಎಡಬಿಡದ ಪ್ರಚಾರ ಮಾಡುತ್ತಿವೆ. ಇಂತದನ್ನು ಕಂಡಾಗ ನನಗೆ ಹೇಸಿಗೆಯೆನಿಸುತ್ತೆ. ಸೌಂದರ್ಯ ಎನ್ನುವುದು ಸಹಜವಾದುದು. ತಿದ್ದಿ-ತೀಡಿ, ಪೇಂಟ್ ಮಾಡಿ ಬರುವಂತದಲ್ಲ ಮತ್ತು ಯಾವುದೇ ಸೌಂದರ್ಯವನ್ನು ನಿರ್ದಿಷ್ಟ ಮಾಪನಗಳಿಗೆ ಅಳವಡಿಸುವುದಾಗಲೀ, ಕೊಳ್ಳುವುದಾಗಲೀ - ಮಾರುವುದಾಗಲೀ ಸಾಧ್ಯವಿಲ್ಲ. ಆದರೆ ನಮ್ಮ ಸೌಂದರ್ಯದ ಕಲ್ಪನೆ ತೀರಾ ಮಿತಿಗೊಳ್ಳುತ್ತಿದ್ದೆ, ಸಾಮಾಜಿಕ ನಿಶ್ಶೈಸುವಿಕೆಗೆ ಒಳಗಾಗುತ್ತಿದೆ. ಈ ಹೊತ್ತಿನ ವಾಣಿಜ್ಯೀಕರಣಗೊಂಡ ಸೌಂದರ್ಯದ ಕಲ್ಪನೆ ಈಗಾಗಲೇ ಭಾಗ-ವಿಭಾಗಗೊಂಡಿರುವ ಸಮಾಜದಲ್ಲಿ ಸೌಂದರ್ಯ-ಕುರೂಪಗಳೆಂಬ ಮತ್ತೂ ಸ್ಪರ್ಧೆಯನ್ನು ಮಾಡುತ್ತದೆ - ಜಾತಿ ವಿಭಾಗ, ವರ್ಗ ವಿಭಾಗ, ವರ್ಣ ವಿಭಾಗ, ಲಿಂಗ ವಿಭಾಗ ಇವೆಲ್ಲ ಪಿತೃ ಪ್ರಧಾನ ಮತ್ತು ಲಾಭಕೋರ ಆಸಕ್ತಿಗಳಿಗೆ ಒತ್ತಾಸೆಯಾಗಿರುವಂತಹವೇ. ಇದು ನನಗೆ ವಯಕ್ತಿಕವಾಗಿ ಮತ್ತು ಸಾಮಾಜಿಕ ಅಂಗವಾಗಿ ತುಂಬಾ ನೋವು ತರುವ ಸಂಗತಿ. ಆದ್ದರಿಂದಲೇ ಸಾರಾಸಗಟಾಗಿ ಹೆಂಗಸಿನ ಮಾರಾಟದ ಮೂಲಕ ಲಾಭ ಗಳಿಸುವ ಸಲುವಾಗಿ ಸೌಂದರ್ಯದ ಹೆಸರಿನಲ್ಲಿ ನಡೆಸುವ ಇಂತಹ ಕೃತ್ಯಗಳನ್ನು ಒಂದಾಗಿ ಪ್ರತಿರೋಧಿಸಬೇಕಾಗಿದೆ.

# "ಸೌಂದರ್ಯ ಇರುವುದು ಎಂಎಸ್‌ಸಿಗಳ ಕಣ್ಣಲ್ಲಿ"

*ಗೀತಾ*

ಮಗುವಾಗಿದ್ದಾಗ ನಾನು ನೋಡಲು ಚೆನ್ನಾಗಿರಲಿಲ್ಲ, ನನಗಿದು ಗೊತ್ತಿರಲಿಲ್ಲ. ಕಾರಣ ನನ್ನ ಮನೆಯವರು ನನ್ನದಿರಲಿ, ಬೇರೆಯಾರದೇ ಸೌಂದರ್ಯದ ಬಗ್ಗೆ ಕಮೆಂಟ್ ಮಾಡುತ್ತಿರಲಿಲ್ಲ. ನಾನು ಬೆಳೆದಂತೆ ಶಾಲೆಗೆ ಹೋಗಲಾರಂಭಿಸಿದಾಗ ನನ್ನ ಜೊತೆಯವರು ನಾನು ಕುರೂಪಿ ಎಂಬ ಭಾವನೆ ಹುಟ್ಟಿಸಿದರು. ನನ್ನ ದಪ್ಪ, ಕಪ್ಪನೆ ಉದ್ದ ಕೂದಲು ಯಾಕೊ ಅವರ ಕಣ್ಣಿಗೆ ಬೀಳುತ್ತಿರಲಿಲ್ಲ. ಆಗಲೆ ನನಗೆ, ನಾನು ಸುಂದರಿ ಇರಲಿ ಚೆನ್ನಾಗಿಯೂ ಇಲ್ಲವೆಂಬ ಭಾವನೆ ಕಾಡತೊಡಗಿದ್ದು. ನನ್ನ ಕೆನ್ನೆಯ ಮೇಲಿರುವ ದೊಡ್ಡ ಕಪ್ಪನೆ ಮಚ್ಚೆಯ ಬಗ್ಗೆ ಯಾವಾಗಲು Conscious ಆಗಿ ಇರುತ್ತಿದ್ದೆ. ನನ್ನ ಮಚ್ಚೆಯ ಬಗ್ಗೆ ಬಹಳಷ್ಟು ಟೀಕೆಗಳನ್ನು ಕೇಳಿದ್ದೆ. ಸುತ್ತ ಮುತ್ತಲಿನ ಜನ ಹೇಳುತ್ತಿದ್ದರು - ಮಚ್ಚೆ ಎಡಗೆನ್ನೆಯ ಮೇಲಿದೆ, ಇದ್ದ ಮನೆ, ಹೋಗುವ ಮನೆ ಎರಡಕ್ಕೂ ಅದೃಷ್ಟ ತರುತ್ತದೆ ಎಂದು ಕೆಲವರೆಂದರೆ, ಉಳಿದವರು ಮಚ್ಚೆಯಿಂದಾಗಿ ಮದುವೆ ಆಗುವುದು ಕಷ್ಟ, ಆಪರೇಶನ್ ಮೂಲಕ ತೆಗೆಸುವುದೊಳ್ಳೆಯದು, ಬಿಳಿಯ ಮುಖದ ಮೇಲೆ ಕೆಟ್ಟದಾಗಿ ಕಾಣುತ್ತದೆ, ಮಚ್ಚೆ ಚಿಕ್ಕದಾಗಿದ್ದರೆ ದೃಷ್ಟಿ ಬೊಟ್ಟಿನಂತಿರುತ್ತಿತ್ತು, ಮುಖದ ಮೇಲೆ ಕರಿ ಮಚ್ಚೆ ಇರುವ ಹುಡುಗಿಯನ್ನು ಯಾರೂ ಮದುವೆಯಾಗರು ಇತ್ಯಾದಿಯಾಗಿ ಹೇಳುತ್ತಿದ್ದರು. ಮುಖದ ಮೇಲೆ ಮಚ್ಚೆ ಇರುವುದರಿಂದ, ನನಗೆ ಮದುವೆಯಾಗುವುದೆಂಬ ನಂಬಿಕೆಯೆ ಇರಲಿಲ್ಲ.

ಸುತ್ತಮುತ್ತಲಿನ ಟೀಕೆಯನ್ನು ಕೇಳುತ್ತಾ ನಾನು ನನ್ನದೆ ಒಂದು ನಿಲುವನ್ನು ಬೆಳೆಸಿಕೊಂಡೆ. ಅದೇನೆಂದರೆ, ನಾನು ಮದುವೆಯಾದರೂ ನನ್ನ ಮಚ್ಚೆಯನ್ನು ಒಪ್ಪಿಕೊಳ್ಳುವ, ನಾನು ಜವಾಬ್ದಾರಳಲ್ಲದ ನನ್ನ ಲಕ್ಷಣಗಳಿಗೆ ಬೆಲೆ ಕೊಡುವುದಕ್ಕಿಂತ ನನ್ನ ಸಾಧನೆಗಳಿಗೆ ಬೆಲೆ ಕೊಡುವ ವ್ಯಕ್ತಿಯನ್ನೆ ನಾನು ಮದುವೆಯಾಗುವುದು. ಆದರೆ ಮದುವೆಯೇ ನನ್ನ ಜೀವನದ ಪರಮ ಗುರಿಯಾಗಿರಲಿಲ್ಲ. ಜೀವನ-ಬರಿ ಮದುವೆಯಷ್ಟೇ ಅಲ್ಲದೆ ಇನ್ನು ಹೆಚ್ಚಿನದನ್ನು ನೀಡುತ್ತದೆ ಎಂದು ನಾನು ನಂಬುತ್ತೇನೆ. ಸೌಂದರ್ಯ ನೋಡುಗರ ಕಣ್ಣಿನಲ್ಲಿದೆ ಎಂಬ ಇಂಗ್ಲೀಷ್ ಗಾದೆಯೊಂದಿದೆ. ಆದರೆ ಸದ್ಯದ ಸೌಂದರ್ಯ ಸ್ಪರ್ಧೆಗಳನ್ನು ಗಮನಿಸುವಾಗ ಅನ್ನಿಸುತ್ತದೆ "ಸೌಂದರ್ಯವಿರುವುದು ಬಹುರಾಷ್ಟ್ರೀಯ ಕಂಪೆನಿಗಳ ಕಣ್ಣಲ್ಲಿ" ಎಂದು.

## ಮುಖಾಮುಖಿ

ಸೌಂದರ್ಯ ಸ್ಪರ್ಧೆ ವಿರೋಧದ ವ್ಯಾಪಕ ಪ್ರಚಾರಾಂದೋಲನದಲ್ಲಿ ತೊಡಗಿಕೊಂಡಿದ್ದ ನಮಗೆ, ವಿವಿಧ ಬಗೆಯ ಜನರೊಟ್ಟಿಗಿನ ಮುಖಾಮುಖಿಯಲ್ಲಿ ಎದುರಾದ ಪ್ರಶ್ನೆಗಳು ಅನೇಕ. ಹೀಗೆ ತುಂಬಾ ಸಾಮಾನ್ಯವಾಗಿ ಬರುತ್ತಿದ್ದ ಪ್ರಶ್ನೆಗಳಿಗೆ/ಅಭಿಪ್ರಾಯಗಳಿಗೆ ಇಲ್ಲಿ ನಾವು ಪ್ರತಿಕ್ರಿಯಿಸಬೇಕೆಂದುಕೊಂಡಿದ್ದೆವಾದರೂ ಪುಟಗಳ ಅಭಾವದಿಂದ ಅದು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಈ ಸಂಚಿಕೆಯಲ್ಲಿ ಪ್ರಾರಂಭವನ್ನು ಮಾತ್ರ ಮಾಡಿ, ಮುಂದಿನ ಸಂಚಿಕೆಗಳಿಗೆ ಅದನ್ನು ಮುಂದುವರಿಸಬೇಕೆಂಬ ಅನಿವಾರ್ಯ ತೀರ್ಮಾನಕ್ಕೆ ಬಂದಿದ್ದೇವೆ. ಅದು ಓದುಗರ ಪ್ರತಿಕ್ರಿಯೆಗಳಿಗೂ ಪಕ್ಕಾಗಿ ಮತ್ತಷ್ಟು ಪರಿಣಾಮಕಾರಿಯಾದ ಚರ್ಚೆಗೆ ಆಸ್ಪದ ಕೊಡಲೆಂಬುದು ನಮ್ಮ ಆಶಯ.

ಅಭಿಪ್ರಾಯ : ಈ ಸೌಂದರ್ಯ ಸ್ಪರ್ಧೆ ಎಂಬುದೆಲ್ಲಾ ಹಳ್ಳಿಗರಿಗೆ, ದಲಿತ ಹೆಂಗಸರಿಗೆ ಸಂಬಂಧಿಸಿದ ಪ್ರಶ್ನೆಯಲ್ಲ. ಬ್ರಾಹ್ಮಣರೇ ಸೌಂದರ್ಯದ ಕಲ್ಪನೆಯನ್ನು ಹುಟ್ಟುಹಾಕಿದ್ದು. ಈಗ ಬ್ರಾಹ್ಮಣರೇ ಪ್ರತಿಭಟಿಸುತ್ತಾರೆ.

ನಮ್ಮ ಪ್ರತಿಕ್ರಿಯೆ : ನಿಜ. ಪ್ರಬಲ ವರ್ಗ/ಜಾತಿಗಳು ಹುಟ್ಟುಹಾಕಿದ ಸೌಂದರ್ಯದ ಕಲ್ಪನೆಯೇ ಚರಿತ್ರೆಯ ಎಲ್ಲ ಸಮಯಗಳಲ್ಲಿ ಎಲ್ಲ ವರ್ಗಗಳ/ಜಾತಿಗಳ ಮೇಲೆ ಹೇರಲ್ಪಟ್ಟಿರುವುದು. ಇದನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕೆನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಆದರೆ ಈ ಹೊತ್ತಿನ, ಬಿಳಿಯರ ಕಲ್ಪನೆಯ ಸೌಂದರ್ಯವನ್ನಾಧರಿಸಿದ ಈ ಸೌಂದರ್ಯ ಸ್ಪರ್ಧೆಗಳು ಈ ನೆಲದ ಹಳ್ಳಿಗರನ್ನು, ದಲಿತರನ್ನು ಮುಟ್ಟದೇ ಇದ್ದಿದ್ದರೆ ಇಂತಹ ನಿರ್ಲಿಪ್ತತೆ ಸರಿಯಾಗುತ್ತಿತ್ತೇನೋ. ಆದರೆ ಇಲ್ಲಿ ಆಗುತ್ತಿರುವದಾದರೂ ಏನು? ತಮ್ಮ ಉತ್ಪನ್ನಗಳ ಮಾರುಕಟ್ಟೆ ವಿಸ್ತರಣೆಗೆ ಸೌಂದರ್ಯ ಸ್ಪರ್ಧೆಗಳನ್ನು ಬಲು ಮುಖ್ಯ ಸಾಧನವನ್ನಾಗಿಸಿಕೊಳ್ಳುವ ಬಲಿತ ದೇಶಗಳ ಕಾಸ್ಮೆಟಿಕ್ ಕಂಪನಿಗಳು, ಎಲ್ಲ ಸಾಧ್ಯವಿರುವ ಪ್ರಚಾರ ಮಾಧ್ಯಮಗಳ ಮುಖಾಂತರ ತಮ್ಮ ಉತ್ಪನ್ನಗಳನ್ನು ಮೂಲೆ-ಮೂಲೆಗೆ ಹೊತ್ತೊಯ್ಯುತ್ತವೆ.

(28ನೇ ಪುಟಕ್ಕೆ ಮುಂದುವರಿದಿದೆ)



## ಸೌಂದರ್ಯವು ಕೋಟ್ಯಾಂತರ ಬಲಿಯರ್ಗಳ ಉದ್ಯಮ

**ಸೌಂದರ್ಯ - ದೊಡ್ಡ ವ್ಯವಹಾರ :**

ಸೌಂದರ್ಯವು ಇಂದು ದೊಡ್ಡ ವ್ಯವಹಾರವಾಗಿದೆ. ಸೌಂದರ್ಯವರ್ಧಕಗಳು, ನವೀನ ಫ್ಯಾಷನ್‌ನ ಉಡುಗೆ-ತೊಡುಗೆ, ಕೂದಲಿನ ವಿನ್ಯಾಸ, ಸೌಂದರ್ಯ ಸಲೂನ್‌ಗಳು, ಸೌಂದರ್ಯ ಸರ್ಜರಿ - ಸೌಂದರ್ಯದ ಇಂತಹ ವಿವಿಧ ಮುಖಗಳಿಂದ ಈ ಉದ್ಯಮದಲ್ಲಿ ಪ್ರತಿ ವರ್ಷ ಬಲಿಯರ್ನ್‌ಗಳಲ್ಲಿ ಲಾಭವನ್ನು ಗಳಿಸಲಾಗುತ್ತಿದೆ. 1981ರಲ್ಲಿ 100 ಕೋಟಿ ಇದ್ದುದು 1995ರಷ್ಟರಲ್ಲಿ 1000 ಕೋಟಿಯಷ್ಟು ಲಾಭ ಏರಿಕೆಯು ಸೌಂದರ್ಯ ಹಾಗೂ ಟಾಯ್‌ಲೆಟ್ ಬಳಕೆ ವಸ್ತುಗಳ ಉದ್ಯಮದಲ್ಲಿ ಹೆಚ್ಚಾಗಿದೆ. ಲಾಭ ಗಳಿಸುವ ಉದ್ದೇಶ ಹೊಂದಿದ ಕಂಪನಿಗಳಿಗೆ ಸೌಂದರ್ಯವು ನಿತ್ಯ ಬಂಗಾರದ ಮೊಟ್ಟೆ ಇಡುವ ಕೋಳಿಯಾಗಿದೆ. ರಾಸ್ ಮುರಾರ್ಕ ಪ್ರಾಥಮಿಕವಾಗಿ ಹಣಕಾಸು ಸಂಸ್ಥೆಯಾಗಿದ್ದು ಈಗ ಉಗುರು ಬಣ್ಣ, ತುಟಿ ಬಣ್ಣ ಇತ್ಯಾದಿಗಳನ್ನು ಉತ್ಪಾದಿಸತೊಡಗಿದೆ. ಈ ಉದ್ಯಮದಲ್ಲಿ ಬರುವ ಹೆಚ್ಚಳ ಲಾಭದ ಗ್ಯಾರಂಟಿಯಿಂದಾಗಿಯೇ ಈ ಸೌಂದರ್ಯ ವರ್ಧಕಗಳ ಉತ್ಪಾದನೆಗೆ ತೊಡಗಿಕೊಂಡುದಾಗಿ ಇದರ ವ್ಯವಸ್ಥಾಪಕ ನಿರ್ದೇಶಕ ಬಹಿರಂಗವಾಗಿಯೇ ಒಪ್ಪಿಕೊಳ್ಳುತ್ತಾರೆ.

**ಆತ್ಮದ್ವೇಷದ ಉರಿ ಹಚ್ಚುವಿಕೆ :**

ತಮ್ಮ ಆಯುಧಗಳನ್ನು ಲಾಭಕ್ಕಾಗಿ ಮಾರುವುದಕ್ಕೋಸ್ಕರ ಕೆಲವು ಆಯುಧ ಸಾಮಗ್ರಿ ತಯಾರಿಸುವ ಕಾರ್ಖಾನೆಗಳು ದ್ವೇಷ ಹಾಗೂ ಯುದ್ಧದ ರಾಜಕೀಯದ ಉರಿಯನ್ನು ಕ್ರಿಯಾತ್ಮಕವಾಗಿ ಹಚ್ಚುವಂತೆ - ಸೌಂದರ್ಯ ಕೈಗಾರಿಕೆಯು ಆತ್ಮದ್ವೇಷದ ಉರಿಯ ರಾಜಕೀಯವನ್ನು ಕ್ರಿಯಾತ್ಮಕವಾಗಿಯೇ ಹೆಂಗಸರಲ್ಲಿ ಹಚ್ಚುತ್ತದೆ. ಇದರಿಂದ ಸೌಂದರ್ಯ ವರ್ಧಕಗಳಿಗೆ ಮಾರ್ಕೆಟ್‌ನಲ್ಲಿ ಬೇಡಿಕೆ ಹೆಚ್ಚಾಗುವಂತೆ ಮಾಡಲಾಗುತ್ತದೆ. 'ಸೌಂದರ್ಯದ ಕಲ್ಟ್' - ನಿರಂತರವಾಗಿ ಹೆಚ್ಚಾಗತೊಡಗಿದೆ. ಇದರ ಹಿಂದಿರುವ ವಾದ ಸರಳವಾದದ್ದು. ಮಿಲಿಯರ್ಗಟ್ಟಲೆ ಮಹಿಳೆಯರಿಗೆ ಕುರೂಪಿಗಳು ಹಾಗೂ ಇಷ್ಟಪಡದಿರುವಂತವರು ಎಂಬ ಭಾವನೆಯನ್ನು ಅವರಲ್ಲಿ ಮೂಡಿಸದಿದ್ದರೆ ಅವರು ಸೌಂದರ್ಯ ವರ್ಧಕಗಳಿಗಾಗಿ ಹಣ ಖರ್ಚು ಮಾಡುವುದಕ್ಕೆ ಇಷ್ಟಪಡಲಾರರು. ಹಾಗಾಗಿ ಜಾಹಿರಾತು ಹಾಗೂ ಇತರ ಬಗೆಯ ರಾಜಕೀಯಗಳಿಂದ ಸೌಂದರ್ಯ ವರ್ಧಕಗಳಿಗೆ ಬಲಿಯಾಗಲು ಅವರನ್ನು ಪ್ರೇರೇಪಿಸಲಾಗುತ್ತದೆ.

**ಸೌಂದರ್ಯ ಸ್ಪರ್ಧೆ - ಬಹುರಾಷ್ಟ್ರೀಯ ಕಂಪನಿಗಳ ಬೇಟೆಗೆ ಸಂತಸದ ತಾಣ :**

'ಗ್ಲಾಮರಸ್' ಮಹಿಳೆಯ ಬಗೆಗಿನ ಹುಚ್ಚನ್ನು ಹೆಚ್ಚು ಮಾಡುವುದಕ್ಕೆ, ಸೌಂದರ್ಯ ಸಾಮಗ್ರಿಗಳನ್ನು ಜಾಹೀರಾತುಗೊಳಿಸುವುದಕ್ಕೆ ಸೌಂದರ್ಯ ಸ್ಪರ್ಧೆಗಳಿಗಿಂತ ಉತ್ತಮವಾದ ದಾರಿ ಯಾವುದಿದೆ? ಉತ್ತಮ ಪ್ರಚಾರಕ್ಕೆ ಹಾಗೂ ಮಾರಾಟ ಕ್ರಮಕ್ಕೆ ಸೌಂದರ್ಯ ಸ್ಪರ್ಧೆಯು ಅತ್ಯುತ್ತಮ ವಿಧಾನವೆಂಬುದನ್ನು ಸೌಂದರ್ಯ ಉದ್ಯಮವು ಕಂಡುಕೊಂಡಿದೆ. ಸೌಂದರ್ಯದ ಉಜ್ವಲ ಪ್ರದರ್ಶನವನ್ನು ಪ್ರಾಯೋಜಿಸುವುದಕ್ಕಾಗಿ ಜಾಹೀರಾತುದಾರರು ಒಬ್ಬರಿಗಿಂತ ಒಬ್ಬರು ಮುಗಿಬೀಳುತ್ತಾರೆ. ಜಾಹೀರಾತುದಾರರ ಬೇಡಿಕೆಗಳನ್ನು ಹೊಂದಿಸಿಕೊಡುವ ಸಲುವಾಗಿ 'ಮಿಸ್ ಇಂಡಿಯಾ' ಸ್ಪರ್ಧೆಯನ್ನು ಏರ್ಪಡಿಸುವ ಸಂಘಟನೆಕಾರರು

*ಕಳೆದ ಸಲದ ವಿಶ್ವಸುಂದರಿ ಅಲೀಸಿಯ ಮಾಚಾಡೋಗೆ, ಸ್ಪರ್ಧೆ ಗೆದ್ದ ನಂತರ ಬರೀ ತಿನ್ನುವ, ನಿದ್ದೆ ಹೊಡೆಯುವ ಯೋಜನೆ ಇತ್ತು. ಇದರಿಂದಾಗಿ ಅವಳ ಕಿರೀಟಕ್ಕೆ ಕಂಟಕ ಬಂದಿದೆ. ಕಾರಣ : ಹೊಟ್ಟೆ ತುಂಬಾ ಖುಷಿಯಾಗಿ ತಿಂದ ಕಾರಣ 51.5 ಕಿಲೋ ಇದ್ದವಳು 57.5 ಕಿಲೋ ಆಗಿದ್ದಾಳೆ. ಒಂದು ವರ್ಷದ ಅವಧಿಯ ಜಾಹೀರಾತಿಗೆ ಒಪ್ಪಿಕೊಂಡಿರುವುದರಿಂದ ಸೌಂದರ್ಯ ಸ್ಪರ್ಧಾಸಂಸ್ಥೆಯು ನೋಟಿಸ್ ಜಾರಿ ಮಾಡಿದೆ. ಜಾಹೀರಾತಿನ ಅವಧಿ ಮುಗಿದಿಲ್ಲ. ಆದ್ದರಿಂದ ತಕ್ಷಣ ತೂಕ ಇಳಿಸಿಕೊಳ್ಳದಿದ್ದರೆ ಕಿರೀಟ ಕಿತ್ತುಕೊಳ್ಳುವುದಾಗಿ ಸಂಸ್ಥೆ ಎಚ್ಚರಿಕೆ ನೀಡಿದೆ. ಪಾಪ! ವಿಶ್ವಕ್ಕೆ ಸುಂದರಿಯಾದವಳಿಗೆ ಹೊಟ್ಟೆ ತುಂಬಾ ಉಣ್ಣುವ ಸ್ವಾತಂತ್ರ್ಯವೂ ಇಲ್ಲ!*

ಇಂತಹ ಅನೇಕ ಸ್ಪರ್ಧೆಗಳನ್ನು ಸೃಷ್ಟಿಸಿದ್ದಾರೆ. ಇಂತಹ ಸ್ಪರ್ಧೆಗಳು ಪ್ರಾಯೋಜಕರ ಹೆಸರುಗಳ ಶೀರ್ಷಿಕೆಯನ್ನೇ ಹೊಂದಿರುತ್ತವೆ. ಹಾಗಾಗಿ ಈಗ ಸನ್ ಸಿಲ್ಕ್, ಮಿಸ್ ಬ್ಯೂಟಿಫುಲ್ ಹೇರ್, ಕಾಲ್ಗೇಟ್, ಮಿಸ್ ಬ್ಯೂಟಿಫುಲ್ ಆಯಿಲ್ ಇತ್ಯಾದಿಗಳನ್ನು ಕಾಣುತ್ತೇವೆ. ಈ ರೀತಿಯ 'ಗ್ಲ್ಯಾಮರಸ್' ಮಾದರಿಗಳನ್ನು ಕುಶಲತೆಯಿಂದ ಹಾಗೂ ಮಾಧ್ಯಮಗಳನ್ನು ಅತ್ಯುತ್ತಮ ರೀತಿಯಲ್ಲಿ ಬಳಸಿಕೊಳ್ಳುವ ಮೂಲಕ ಸೃಷ್ಟಿಸಲಾಗುತ್ತದೆ. 'ದಿ ಟೈಮ್ಸ್ ಆಫ್ ಇಂಡಿಯ' 1995ರ ಮಿಸ್ ಇಂಡಿಯ ಸ್ಪರ್ಧೆಯಲ್ಲಿ ಗೆದ್ದವರಿಗೆ 8 ಪುಟಗಳ ಕಾಲಂಗಳನ್ನು ಮೀಸಲಾಗಿಟ್ಟಿತ್ತು. 'ಚರರ್-ಇ-ಶರೀಫ್' ಮಸೀದಿಯ ದಹನದ ವರದಿಯನ್ನು ಎರಡನೆಯ ಸ್ಥಾನಕ್ಕೆ ತಳ್ಳಲಾಯಿತು. ಬೆನೆಟ್ ಹಾಗೂ ಕೋಲ್‌ಮೆನ್ ಗುಂಪು ಸುಶ್ಮಿತಾ ಸೇನ್ ಹಾಗೂ ಐಶ್ವರ್ಯರಾಯ್ ಅವರನ್ನು ರಾಜರಾಣ್ಯಿಕೆಯ ನೆನಪುಗಳಂತೆ ದೆಹಲಿಯ ಶಾಂತಿ ಪಥ್ ರಸ್ತೆಯಲ್ಲಿ ಪೆರೇಡ್ ಮಾಡಲಾಯಿತು.

ಟೈಮ್ಸ್ ಆಫ್ ಇಂಡಿಯಾವನ್ನು ಸೌಂದರ್ಯವನ್ನು ಪ್ರಚೋದಿಸುತ್ತದೆನ್ನುವ ಕಾರಣಕ್ಕೆ ಕಟುವಾಗಿ ಟೀಕಿಸುವ ಇಂಡಿಯನ್ ಎಕ್ಸ್‌ಪ್ರೆಸ್ ತಮ್ಮದೇ ಆದ 'ಸೂಪರ್ ಮಾಡೆಲ್' ಸ್ಪರ್ಧೆಯನ್ನು ಪ್ರಾಯೋಜಿಸಲು ಮುಂದಾಯಿತು. ಏಕೆಂದರೂ ಸೌಂದರ್ಯ ವ್ಯವಹಾರವು ಒಂದು ದೊಡ್ಡ ವ್ಯವಹಾರವೇ.

**ನೀನು ನನ್ನ ಬೆನ್ನು ಕೆರೆದರೆ ನಾನು ನಿನ್ನದನ್ನು ಕೆರೆಯುತ್ತೇನೆ (ಅಥವಾ ಸರ್ಕಾರದ ಆರ್ಥಿಕ ನೀತಿ ಹಾಗೂ ಬಹುರಾಷ್ಟ್ರೀಯ ಆರ್ಥಿಕ ನೀತಿಯ ನಡುವಿನ ಅನೈತಿಕ ಸಂಬಂಧ) :**

ಐಶ್ವರ್ಯ ರಾಯ್ ಹಾಗೂ ಸುಶ್ಮಿತಾ ಸೇನರ ಅಂತರ್‌ರಾಷ್ಟ್ರೀಯ ಹಂತದಲ್ಲಿನ ಜಯ ಗಳಿಸುವಿಕೆ ಭಾರತದ ಮಧ್ಯಮ ವರ್ಗದ ಸಾಮಾನ್ಯ ಜನರಿಗೆ ಈಗ ಇದು ಇಂಡಿಯಾದ ಸುಂದರಿಯರ ಕಾಲವೆಂದು ಕಂಡುಬರುವಂತೆ ತೋರುತ್ತದೆ. ಆದರೆ ಇದು ಹೀಗಿರುವುದಿಲ್ಲ. ಸೌಂದರ್ಯ ಸ್ಪರ್ಧೆಯ ನಿಜವಾದ ಉದ್ದೇಶವೇ ಬೇರೆಯಾಗಿರುತ್ತದೆ. ಮುಖ್ಯ ಕಾರಣಗಳಿಗಾಗಿ ಮಾಧ್ಯಮಗಳು ನಿಜವಾದ ಉದ್ದೇಶಗಳನ್ನು ನಮಗೆ ಹೇಳುವುದಿಲ್ಲ. ಹೇಗೆಂದರೂ ಸೌಂದರ್ಯ ಸ್ಪರ್ಧೆಯ ಜಯಶಾಲಿಯನ್ನು ಘೋಷಿಸುವಲ್ಲಿ ಹಾಗೂ ಸೌಂದರ್ಯ ಉದ್ದಿಮೆಯ ವಸ್ತುಗಳ ಮಾರ್ಕೆಟ್‌ಗಳ ಮಧ್ಯೆ ಅನೈತಿಕ ನಂಟು ಇರುವುದು ತುಂಬಾ ಸ್ಪಷ್ಟವಾಗಿದೆ. ಸ್ಪರ್ಧೆ ನಡೆಸುವ ದೇಶದಲ್ಲಿ ಸೌಂದರ್ಯ ವರ್ಧಕಗಳ ಮಾರ್ಕೆಟ್ ಮೇಲೆ ಪ್ರಾಯೋಜಕರಿಗಿರುವ ಆಸ್ಥೆ-ಸೌಂದರ್ಯ ಸ್ಪರ್ಧೆಯ ಜಯಶಾಲಿಯ ನಿರ್ಧರಿಸುವಿಕೆಯ ಮೇಲೆ ಮುಖ್ಯವಾದ ಪ್ರಭಾವವನ್ನು ಬೀರುತ್ತದೆ. ಯಾವ ದೇಶದಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಸೌಂದರ್ಯ ವರ್ಧಕಗಳಿಗೆ ಆರ್ಥಿಕ ಹಾಗೂ ರಾಜಕೀಯ ಬೆಂಬಲ ಇರುತ್ತದೋ ಹಾಗೂ ಯಾವ ಸರ್ಕಾರಗಳು ನಯವಾಗಿ ಹಾಗೂ ಅವರ ಬಂಡವಾಳ ಹೂಡುವಿಕೆಗೆ ಪೂರಕವಾಗಿರುತ್ತವೆಯೋ ಅಂತಹ ದೇಶಗಳ ಸ್ಪರ್ಧಿಗಳು ಜಯಶಾಲಿಗಳಾಗುತ್ತಾರೆಂಬುದು ಸರ್ವವಿಧಿತವಾದ ವಿಚಾರ. ಹಾಗಾಗಿ ಒಂದು ನಿರ್ದಿಷ್ಟ ದೇಶಕ್ಕೆ ಹೋಗುವ 'ಸೌಂದರ್ಯ ರಾಣಿ'ಯ ಕಿರೀಟ ಪರೋಕ್ಷವಾಗಿ ಆ ದೇಶದ ಸರ್ಕಾರದ ಮುಕ್ತ ಆರ್ಥಿಕ ನೀತಿಗಳಿಗೆ ನೀಡಿದ ಕಿರೀಟವಾಗಿರುತ್ತದೆ. ಲ್ಯಾಟಿನ್ ಅಮೇರಿಕ 'ಬೂಮ್ ಕಾಂಟಿನೆಂಟ್' ಎಂದು ಗುರುತಿಸಲ್ಪಟ್ಟಾಗ ಲ್ಯಾಟಿನ್ ಅಮೇರಿಕದ ಬ್ರೆಜಿಲ್, ವೆನಿಸ್‌ಜುಲ, ಕೋಸ್ಟಾರಿಕಾ ದೇಶಗಳಿಂದ ಸಾಕಷ್ಟು ಸುಂದರಿಯರು ಜಯಶಾಲಿಗಳಾದರು. ಇದೀಗ ಭಾರತದ ಸರದಿ. ಸೌಂದರ್ಯ ಸ್ಪರ್ಧೆ ಏರ್ಪಡಿಸುವ ಮಿಸ್ ಯೂನಿವರ್ಸ್ ಇನ್‌ಕಾರ್ಪೋರೇಟೆಡ್‌ನ ಪ್ರತಿನಿಧಿ ಮಾರ್ಟಿನ್ ಬ್ರೂಕ್ಸ್ 1996ರ ಮಿಸ್ ಯೂನಿವರ್ಸ್ ಸ್ಪರ್ಧೆಗೆ ಭಾರತ ಸ್ಥಳವಾಗಬಹುದಾದ್ದರಿಂದ ಮತ್ತೊಬ್ಬ ಜಯಶಾಲಿಯನ್ನು 'ನೋಡಬೇಕು' ಎಂದು ಹೇಳಿಕೆ ಇತ್ತರು. ಹಿಂದಿನ ಮಿಸ್ ಯೂನಿವರ್ಸ್ - ಮಿಸ್ ಇಂಡಿಯಾ ಹೀಗೆ ನುಡಿದರೆಂದು ವರದಿಯಾಗಿದೆ :

"ಏನು ನಿಜವಾಗಿ ನಡೆಯುತ್ತದೆ ಎಂದರೆ ಸಂಘಟನೆಕಾರರು ಪರೋಕ್ಷವಾಗಿ ಆ ವರ್ಷ ರಾಜಕೀಯ ಕಾರಣಕ್ಕಾಗಿ ಅಮೇರಿಕ ಮುಖ್ಯವೆಂದೋ ಅಥವಾ ಥೈಲ್ಯಾಂಡ್ ರಾಜಕೀಯವಾಗಿ ಆ ಸಂದರ್ಭದಲ್ಲಿ ಇನ್ನೂ ಮುಖ್ಯವೆಂದೋ ಹೇಳುತ್ತಾರೆ. ಅವರು ನಿರ್ದಿಷ್ಟ ವ್ಯಕ್ತಿಯನ್ನು ಆರಿಸುವಂತೆ ನೇರವಾಗಿ ನಿಮಗೆ ಹೇಳುವುದಿಲ್ಲ".

ಇಂದು ಜಯಶಾಲಿಗಳಾಗಿರುವ ಸುಶ್ಮಿತಾಸೇನ್ ಅಥವಾ ಐಶ್ವರ್ಯ ರಾಯ್ ಎಂದರೆ, 200 ಮಿಲಿಯನ್ ಭಾರತೀಯ ಮಧ್ಯಮವರ್ಗದ ಹಣವಿರುವ ಮಹಿಳೆಯರು ಏಕಾಏಕಿ 'ಸೌಂದರ್ಯ ರಾಣಿ'ಯರಾಗುವ ಕರುಣಾಜನಕ ಪ್ರಯತ್ನಗಳಲ್ಲಿ ಎಲ್ಲಾ ರೀತಿಯ ಸೌಂದರ್ಯ ವರ್ಧಕಗಳನ್ನು ಕೊಳ್ಳುವಂತಹ ಮಹಿಳೆಯರಾಗಿ ಬಿಡುತ್ತಾರೆ ಎಂದೇ ಅರ್ಥ. ಕಾಸ್ಮೆಟಿಕ್ ಸರ್ಜರಿಯನ್ನು ಜನಪ್ರಿಯ ಗೊಳಿಸಲಿಕ್ಕೂ ಇದು ಸದಾವಕಾಶ.

ಸೌಂದರ್ಯ ಸ್ಪರ್ಧೆಗಳು ಮತ್ತು ಅವುಗಳಲ್ಲಿ ಗೆಲ್ಲುವ ಸೌಂದರ್ಯ ರಾಣಿಯರು ಜಾಹಿರಾತಿನ ಸಾಮಗ್ರಿಗಳಲ್ಲದೆ ಮತ್ತೇನೂ ಅಲ್ಲ. ಸ್ಪರ್ಧೆಯಲ್ಲಿ ಗೆದ್ದವರನ್ನು ಸಾರಾಸಗಟಾಗಿ ಒಂದು ವಾಣಿಜ್ಯ ಉದ್ಯಮವನ್ನಾಗಿಸಿಬಿಟ್ಟು ಬಳಸಿಕೊಳ್ಳಲಾಗುತ್ತದೆ, ಮಾರಲಾಗುತ್ತದೆ. ಹಿಂದಿನ ವ್ಯೋಮ ಸುಂದರಿ ಸುಶ್ಮಿತಾಸೇನ್

ನವದೆಹಲಿಯಲ್ಲಿ ಅಮೆರಿಕಾದ ಕಂಪನಿ 'ಆಪಲ್ ಕಂಪ್ಯೂಟರ್ಸ್'ಗೆ ಮಾಡಿದ್ದು ಇದನ್ನೇ - ಈ ಸುಶ್ಮಿತಾಸೇನ್ ಐಶ್ವರ್ಯರೈಗಳು ಪ್ರಾಯೋಜಕರ ಒಳ ಉದ್ದೇಶಗಳಾದ ವಾಣಿಜ್ಯಾಸಕ್ತಿಗಳಿಗೆ "ಸೌಂದರ್ಯ ಸ್ಪರ್ಧೆ"ಯ ದಾಳಗಳಾಗಿ ಬಳಕೆಯಾಗುತ್ತಾರೆ. ಇವರಿಬ್ಬರಿಗೂ "ಸೌಂದರ್ಯ ರಾಣಿ" ಕಿರೀಟ ಧರಿಸಿಕೊಂಡಾಕ್ಷಣದಲ್ಲೇ ಪೆಪ್ಸಿ ಕಂಪನಿಯು ಅವರನ್ನು ಬಾಡಿಗೆಗೆ ಹಿಡಿದುಬಿಟ್ಟಿತು. ಈ 'ಸುಂದರಿ'ಯರನ್ನು ಬಳಸಿಕೊಂಡು ಕೆಲ ನಯಾಪೈಸೆ ಕಿಮ್ಮತ್ತಿನ ಸುವಾಸಿತ ಬಣ್ಣದ ನೀರನ್ನು ಆರು ರೂಪಾಯಿಗಳಿಗೆ ಸುಖವಾಗಿ ಮಾರಾಟ ಮಾಡುವಲ್ಲಿ ಯಶಸ್ವಿಯಾಯಿತು. ಸುಶ್ಮಿತಾಸೇನ್‌ಳಿಗೆ ಸುಂದರಿ ಪಟ್ಟ ಕಟ್ಟಿದ ಮಿಸ್ ಯೂನಿವರ್ಸಿನ ಮಾಲೀಕರು ತಮ್ಮ ಕಂಪನಿಯನ್ನು ಪ್ರಪಂಚದಾದ್ಯಂತ ಪ್ರತಿನಿಧಿಸಲು 50 ಸಾವಿರ ಡಾಲರುಗಳಿಗೆ ಆಕೆಯನ್ನು ನೇಮಿಸಿಕೊಂಡಿರುವುದಾಗಿ ಸಾರಿದರು.

ಶೃಂಗಾರ ಸಾಧನಗಳ ಕಂಪನಿಗಳು ದೇಶವನ್ನು ಇಂದು ಹೆಚ್ಚು ಹೆಚ್ಚಾಗಿ ಪ್ರವೇಶಿಸುವುದಕ್ಕೆ ಸರ್ಕಾರಗಳು ಸಹಾಯವೆಸಗುತ್ತಿವೆ. ಕಳೆದ ಮೂರು ವರ್ಷಗಳಲ್ಲಿ ನಮ್ಮ ಸರ್ಕಾರವು ಶೃಂಗಾರ ಸಾಧನಗಳ ಮೇಲಿನ ತೆರಿಗೆಯನ್ನು 120%ನಿಂದ 40%ಗೆ ಇಳಿಸಿದೆ. ಆದರೆ ನೀರು, ಇಂಧನ, ವಿದ್ಯುಚ್ಛಕ್ತಿಯ ಮೇಲಿನ ತೆರಿಗೆ ಮಧ್ಯಮ ವರ್ಗದವರಿಗೆ ಕೈಗೆಟುಕದಷ್ಟು ಮೇಲೇರಿದೆ. ಬಹುರಾಷ್ಟ್ರೀಯ ಕಂಪನಿಗಳಿಗೆ, ಮುಖ್ಯವಾಗಿ ಅಮಿತಾಬಚ್ಚನ್ ಕಂಪನಿಗೆ ತಲೆಹಿಡುಕ ಕೆಲಸ ಮಾಡುವ ಜೆ. ಎಚ್. ಪಟೇಲರ ಸರ್ಕಾರವು ಕರ್ನಾಟಕ ಸರ್ಕಾರದ ಮುಖ್ಯ ಸ್ಥಳಗಳಾದ ವಿಧಾನಸೌಧ ಹಾಗೂ ಕಬ್ಬನ್ ಪಾರ್ಕ್‌ಗಳನ್ನು ಅಮಿತಾಬಚ್ಚನ್‌ರಿಗೆ ಬಳಸಲಿಕ್ಕೆ ಕೊಡಲು ಸಹಾ ಹಿಂಜರಿಯಲಿಲ್ಲ. ಹಾಗಾದರೆ ಇಂತಹ ಸರ್ಕಾರದ ನೀತಿಗಳು ಎಷ್ಟು ಜನಪರವಾಗಿರುತ್ತವೆ ಎಂಬುದನ್ನು ನಾವು ಯೋಚಿಸಬೇಕಾಗುತ್ತದೆ.

**ಕಾರ್ಪೋರೇಟ್‌ನ ಸ್ವಚ್ಛ ಚಿತ್ರ ಹಾಗೂ ಕಾರ್ಪೊರೇಟ್‌ನ ಕೊಳಕು ನೀತಿಗಳು :**

ಶೃಂಗಾರ ಸಾಧನ ಕಂಪನಿಗಳು ನಿರಂತರವಾಗಿ ಪ್ರಾಮಾಣಿಕ, ಸುಂದರ, ನ್ಯಾಯಯುತ ಹಾಗೂ ಎಲ್ಲಾ ರೀತಿಯ ಕೊಳಕು ವ್ಯವಹಾರದಿಂದ ದೂರವಾಗಿರುವ ಕಾರ್ಪೊರೇಟ್‌ನ ಸ್ವಚ್ಛ ಚಿತ್ರವನ್ನು ನಮಗೆ ನೀಡುತ್ತವೆ. ಹಿಂದೂಸ್ಥಾನ್ ಲೀವರ್ಸ್, ಗೋದ್ರೇಜ್, ಲ್ಯಾಕ್‌ಮಿ, ಪ್ರಾಕ್ಟರ್ ಆಂಡ್ ಗ್ಯಾಂಬಲ್ ಇವೆಲ್ಲವೂ ಶೃಂಗಾರ ಸಾಧನದ ಮುಖ್ಯ ಕಂಪನಿಗಳು. ಆದರೆ ತಾವು ಸರಿ ಎನ್ನುವ ಮುಖವಾಡದ ಕೆಳಗಡೆ ಅವರು ಸುಲಭವಾಗಿ ಮೋಸ ಮಾಡುತ್ತಾರೆ ಹಾಗೂ ಅನ್ಯಾಯಯುತ ರೀತಿಯಲ್ಲಿ ಶ್ರಮಜೀವಿಗಳ ಶ್ರಮವನ್ನು ಬಳಸಿಕೊಳ್ಳುತ್ತಾರೆ.

ಉದಾಹರಣೆಗೆ, ಇಂಡಿಯಾದ ಗ್ರಾಹಕರ ಗೈಡೆನ್ಸ್ ಸೊಸೈಟಿಯು ಹಿಂದೂಸ್ಥಾನ್ ಲಿವರ್ ನಡೆಸುವ ಅನ್ಯಾಯಗಳನ್ನು ಬಹಿರಂಗಪಡಿಸಿತು. ಲೈಫ್‌ಬಾಯ್ ಸೋಪಿನ ತಯಾರಿಕೆಯಲ್ಲಿ ಹಿಂದೂಸ್ಥಾನ್ ಲಿವರ್ ಮಣ್ಣು ಮತ್ತು ಇತರ ಕೊಳಕು ಪದಾರ್ಥಗಳನ್ನು ಸೇರಿಸುತ್ತದೆ ಎಂಬುದು ಬೆಳಕಿಗೆ ಬಂದಿತು. ಆನಂತರ ಎಲ್ಲಾ ವಸ್ತುಗಳ ಬೆಲೆ ಹಾಗೂ ತೆರಿಗೆಯ ದರ ಅಧಿಕವಿದ್ದಾಗ್ಯೂ ಸಹ "ಲೈಫ್ ಬಾಯ್ ಪ್ರಪಂಚದ ಅತ್ಯಂತ ಕಡಿಮೆ ದರದ ಸೋಪು" ಎನ್ನುವ ಜಾಹಿರಾತಿನೊಡನೆ ಸೋಪನ್ನು ಮಾರಲು ಹಿಂದೂಸ್ಥಾನ್ ಲಿವರ್ ಪ್ರಯತ್ನಿಸಿತು. ಹಾಗೆಯೇ ಗೋದ್ರೇಜ್ ಮತ್ತು ಬಹುರಾಷ್ಟ್ರೀಯ ಕಂಪನಿ ಪ್ರಾಕ್ಟರ್ ಆಂಡ್ ಗ್ಯಾಂಬಲ್ ಕಂಪನಿಗಳು - ಲೈಮ್‌ಲೈಟ್, ವಿಜಿಲ್ ಮತ್ತು ಗಂಗಾ ಎನ್ನುವಂತಹ ಬೆರೆಕೆ ಸೋಪುಗಳನ್ನು ಸರ್ಕಾರದ ನಿಯಮಾವಳಿಗಳನ್ನು ಉಲ್ಲಂಘಿಸಿ ತಯಾರಿಸಿದವು. ಇದು ಬಹಿರಂಗವಾದಾಗ ಮೊದಲೆರಡು ಸೋಪುಗಳನ್ನು ಮಾರ್ಕೆಟ್‌ನಿಂದ ಹಿಂತೆಗೆದುಕೊಳ್ಳಲಾಯಿತು. ಪ್ರಾಕ್ಟರ್ ಆಂಡ್ ಗ್ಯಾಂಬಲ್ 'ಗಂಗಾ' ಸೋಪನ್ನು ನ್ಯಾಯಯುತ ಕಾನೂನುಗಳ ಪರಿಮಿತಿಯಲ್ಲಿಯೇ ತಯಾರಿಸುವುದು ಅನಿವಾರ್ಯವಾಯಿತು.

ದೊಡ್ಡ ಪ್ರಮಾಣದಲ್ಲಿ ಉಪ-ಒಪ್ಪಂದ ಪದ್ಧತಿಯನ್ನು ಹಾಗೂ ಯಾವುದೇ ಕಾನೂನು ಚೌಕಟ್ಟಿಲ್ಲದೇ ಜನರ ಶ್ರಮಶಕ್ತಿಯನ್ನು ತನ್ನ ಉತ್ಪಾದನಾ ಚಟುವಟಿಕೆಗಳಿಗೆ ಬಳಸಿಕೊಂಡ ಅನೇಕ ಕಂಪನಿಗಳಲ್ಲಿ ಹಿಂದೂಸ್ಥಾನ್ ಲಿವರ್ ಪ್ರಥಮವಾದದ್ದು. ತನ್ನ 'ಬಾಂಬೆ ಪ್ಲ್ಯಾಂಟ್'ನ ಅನ್ಯಾಯಯುತ 'ಲಾಕ್ ಔಟ್'ನ್ನು 1989ರಲ್ಲಿ ಬಳಸಿಕೊಂಡ ಹಿಂದೂಸ್ಥಾನ್ ಲಿವರ್ ಉಪ-ಒಪ್ಪಂದ ಪದ್ಧತಿಯನ್ನು ದೊಡ್ಡ ಪ್ರಮಾಣದಲ್ಲಿ ಬಳಸಿಕೊಂಡಿತು. ಜೆ. ಎಲ್. ಮಾರಿಸನ್ (ಇಂಡಿಯ) ಲಿಮಿಟೆಡ್ - ನಿವಿಯ ಕ್ರೀಮ್‌ನ ಉತ್ಪಾದಕರಾದ ಈ ಕಂಪನಿ ಬೆಂಗಳೂರು ಹಾಗೂ ಬಾಂಬೆಗಳಲ್ಲಿ ತಮ್ಮ ಕಾರ್ಖಾನೆಗಳನ್ನು ಅನ್ಯಾಯದ ಕ್ರಮದಲ್ಲಿ ಮುಚ್ಚಲು ನಿರ್ಧರಿಸಿದೆ. ಇದಕ್ಕೆ ಕಾರಣ ಕೋರ್ಟಿನ ಆದೇಶಗಳು ಅವರಿಗೆ ಪೂರಕವಾಗದಿರುವುದು ಹಾಗೂ ತಮ್ಮ ಇಡಿಯ ಉತ್ಪಾದನಾ ಚಟುವಟಿಕೆಗಳನ್ನು ಕಾನೂನಿನ ಚೌಕಟ್ಟಿಗೆ ಒಳಪಡದ ಅಸಂಘಟಿತ ಕ್ಷೇತ್ರಕ್ಕೆ ವರ್ಗಾಯಿಸುವುದಕ್ಕಾಗಿ. ಈ ಕ್ರಮವು ಇಂದು ಎಲ್ಲಾ ಶೃಂಗಾರ ಸಾಧನ ಕಂಪನಿಗಳ ಕಾರ್ಯಾಚರಣೆಯಾಗಿ ಬಿಟ್ಟಿರುವುದು ದುರಂತದ ಸಂಗತಿ.

# ಸೌಂದರ್ಯವರ್ಧಕ ಅಥವಾ ಶೃಂಗಾರ ಸಾಧನ ಉದ್ದಿಮೆಗಳು ಮತ್ತು ಅವರ ರಾಜಕೀಯ

ತಮ್ಮ ಗಳಿಕೆಗೋಸ್ಕರ, ಲಾಭಕ್ಕೋಸ್ಕರ ಇಂದು ಸೌಂದರ್ಯವರ್ಧಕ ಅಥವಾ ಶೃಂಗಾರ ಸಾಧನದ ಉದ್ದಿಮೆಗಳು ಇಡಿಯ ಪ್ರಪಂಚದಾದ್ಯಂತ ಹೆಣ್ಣಿನ ಸೌಂದರ್ಯವನ್ನು ತಮ್ಮ ಬಂಡವಾಳವನ್ನಾಗಿಸಿಕೊಳ್ಳಲು ತೀವ್ರ ಪೈಪೋಟಿ ನಡೆಸುತ್ತಿವೆ. ಹಾಗಾಗಿಯೇ 'ಸೌಂದರ್ಯ ಸ್ಪರ್ಧೆಗೆ' ಹಿಂದೆಂದೂ ಇಲ್ಲದಷ್ಟು ಪ್ರಾಮುಖ್ಯತೆ ಇಂದು ದೊರಕಿ ಪ್ರಪಂಚದಾದ್ಯಂತ ಇದೊಂದು ದೊಡ್ಡ ಸಂಗತಿಯಾಗಿ ಪರಿಣಮಿಸಿದೆ. ಈ ಹಂತದಲ್ಲಿಯೇ ಮೂರನೇ ಜಗತ್ತಿಗೆ ಬಹುರಾಷ್ಟ್ರೀಯ ಕಂಪನಿಗಳು ನಿರಂತರವಾಗಿ ದಾಳಿ ಇಡುತ್ತಿವೆ. ಇಂದು ಭಾರತದಲ್ಲಿ ಶೃಂಗಾರ ಸಾಧನದ ಅನೇಕ ಬಹುರಾಷ್ಟ್ರೀಯ ಹಾಗೂ ರಾಷ್ಟ್ರೀಯ ಕಂಪನಿಗಳನ್ನು ನಾವು ಕಾಣ ಬಹುದಾಗಿದೆ.

'ರೆವಲಾನ್' - ಮುಂದಿನ ಮೂರು ವರ್ಷಗಳಲ್ಲಿ 100 ಕೋಟಿ ಮಾರಾಟದ ಗುರಿ ಇಟ್ಟುಕೊಂಡು ಈಗಾಗಲೇ ಅದರ ವಸ್ತುಗಳನ್ನು ಮಾರುತ್ತಿದೆ.

'ಓರಿಫ್ಲೇಮ್' - ಎನ್ನುವ ಸ್ವೀಡಿಷ್‌ನ ಶೃಂಗಾರ ಸಾಧನ ಕಂಪನಿ ಭಾರತದ ರೋಲ್‌ಸನ್' ಜೊತೆಯಾಗಿ 21 ಕೋಟಿ ಮೂಲ ಬಂಡವಾಳದ ಹೂಡುವಿಕೆಯಿಂದ ಶೃಂಗಾರ ಸಾಧನ ತಯಾರಿಸಲು ಯೋಜಿಸಿದೆ.

ಭಾರತದ 'ಬೆನ್‌ಸರ್' ಚರ್ಮ ರಕ್ಷಣೆಯ ಶೃಂಗಾರ ಸಾಧನವನ್ನು ಕೋಟಿ ವಿಟಾಕೇರ್ ಎಂಬ ಹೆಸರಿನಲ್ಲಿ ಪ್ರಾರಂಭಿಸಿದೆ.

ಫ್ರಾನ್ಸ್‌ನ 'ಬರ್‌ಹೆರಾಕ್' ದೆಹಲಿಯ 'ಮೈ ಫೇರ್ ಲೇಡಿ' - ಜೊತೆಯಾಗಿ ಉಗುರುಬಣ್ಣ, ಲಿಪ್‌ಸ್ಟಿಕ್ ಇತ್ಯಾದಿ ಸಾಧನಗಳನ್ನು ತಯಾರಿಸತೊಡಗಿದ.

'ಶೃಂಗಾರ ಸಾಧನ'ದ ಉದ್ಯಮವು ಹೆಣ್ಣಿನ ಸೌಂದರ್ಯಕ್ಕೆ ಉದಾರವಾಗಿರತಕ್ಕಂತಹ ಫಾರ್ಮುಲವನ್ನು

## ಸುಂದರಿಯರಾಗಬೇಕೆ? ಶಸ್ತ್ರಚಿಕಿತ್ಸೆ ಮಾಡಿಕೊಳ್ಳಿ!

ಲಭ್ಯವಿರುವ ಶಸ್ತ್ರಚಿಕಿತ್ಸೆಗಳೆಂದರೆ - ಮೂಗುತಿದ್ದುವುದು, ಕೊಬ್ಬು ಹೀರುವುದು, ಕಲೆಗಳನ್ನು ತೆಗೆಯುವುದು, ಮುಖವನ್ನು ಎತ್ತರಿಸುವುದು, ಕಣ್ಣು ರೆಪ್ಪೆಗಳ ಸರಿಪಡಿಸುವುದು, ತುಟಿ-ಗಲ್ಲ, ಕಿವಿ ಸರಿಪಡಿಸುವುದು, ಮೊಲೆಗಳನ್ನು ಸುಂದರಿಯ ಮೊಲೆಗಳ ಗಾತ್ರಕ್ಕೆ ರೂಪಿಸುವುದು. ಇಷ್ಟೆ ಅಲ್ಲ ಉಗುರು, ಚರ್ಮ, ಕೂದಲು ಇತ್ಯಾದಿಗಳನ್ನು ಸುಂದರಿಗೆ ತಕ್ಕಂತೆ ಮಾರ್ಪಾಡು ಮಾಡಬಹುದು. ಅಲ್ಲದೆ ನಿಮ್ಮ ನಡಿಗೆ, ನೋಟ, ನಗೆ ಎಲ್ಲವನ್ನು ತಿದ್ದಬಹುದು!

ಕಂಡು ಹಿಡಿದಿವೆ. ಹೆಚ್ಚು ಹೆಚ್ಚು ಲಾಭ ಗಳಿಸುವುದಕ್ಕೋಸ್ಕರ ಈ ಉದ್ಯಮವು ಆಗಾಗ್ಗೆ ಹೊಸ ಹೊಸ ಜಾಹಿರಾತುಗಳನ್ನು ಕಂಡು ಹಿಡಿಯುತ್ತದೆ. ಈ ಮೂಲಕ ಈ ವಸ್ತುಗಳು ಹೆಂಗಸರಿಗೆ 'ಅಗತ್ಯ', 'ಇಷ್ಟ' ಎನ್ನುವಂತಹ ಒಂದು ಪ್ರಚಾರವನ್ನು ಸೃಷ್ಟಿ ಮಾಡುತ್ತಾರೆ. ಚರ್ಮದ 'ಸುಕ್ಕು'ಗಳನ್ನು ತೊಡೆದು ಹಾಕುತ್ತದೆ, 'ತ್ವಚೆಯನ್ನು ಸುಂದರಗೊಳಿಸುತ್ತದೆ', 'ಚರ್ಮ ಮಿರ ಮಿರನೆ ಮಿಂಚುವಂತೆ ಮಾಡುತ್ತದೆ', ಇತ್ಯಾದಿ ಜಾಹಿರಾತುಗಳ ಮೂಲಕ ಶೃಂಗಾರ ಸಾಧನಗಳನ್ನು ಕೊಳ್ಳುವಂತೆ ಮಹಿಳೆಯರ ಮೇಲೆ ಅಧಿಕ ಒತ್ತಡ ಹೇರಲಾಗುತ್ತದೆ. ಇವು ಅತ್ಯಂತ ದುಬಾರಿಯ ಜಾಹಿರಾತುಗಳಾದ್ದರಿಂದ ವಸ್ತುವಿನ ಬೆಲೆಯಲ್ಲಿ ಜಾಹಿರಾತಿನ ಖರ್ಚೂ ಕೂಡಾ ಸೇರಿಬಿಡುತ್ತದೆ. ಈ ಯಾವುದಾದರೂ ವಸ್ತುವಿನ ಮೇಲೆ ಸಂಶೋಧನೆ ನಡೆಸಿದಲ್ಲಿ ಅದರ ಖರ್ಚನ್ನೂ ವಸ್ತುವಿನ ಬೆಲೆಯಲ್ಲಿ ಸೇರಿಸಲಾಗುತ್ತದೆ. ಗ್ಲ್ಯಾಮರಸ್ ಆಗಿರುವ ವಿನ್ಯಾಸ ಹಾಗೂ ಪ್ಯಾಕೇಜ್‌ಗಳಿಂದಾಗಿ ವಸ್ತುವಿನ ಬೆಲೆ ಇನ್ನಷ್ಟು ದುಬಾರಿಯಾಗುತ್ತದೆ. ಇದರ ಜೊತೆಗೆ ಗ್ರಾಹಕರಿಗೆ ಸುಲಭವಾಗಿ ಮೋಸ ಕೂಡಾ ಮಾಡಿಬಿಡುವಂತಹ ಉದಾಹರಣೆಗಳು ಹಿಂದೂಸ್ಥಾನ್ ಲಿವರ್‌ನಂತಹ ಕಂಪನಿಯಿಂದಲೇ ನಮಗೆ ದೊರೆಯುತ್ತವೆ. (ಕಾರ್ಪೊರೇಟ್‌ನ ಸ್ವಚ್ಛ ಚಿತ್ರ ಹಾಗೂ ಕೊಳಕು ನೀತಿಗಳು - ನೋಡಿ)

'ಸೌಂದರ್ಯ' ಉದ್ದಿಮೆಯು ಸರ್ಕಾರದ ನಿಯಮಾವಳಿಗಳನ್ನು ಉಲ್ಲಂಘಿಸುತ್ತಲೇ ಇರುತ್ತವೆ. ವಸ್ತುಗಳ ಮೇಲಿನ ವೈಜ್ಞಾನಿಕ ಸಂಶೋಧನೆಯನ್ನು ಕಂಪನಿಗಳು ನಿರಂತರವಾಗಿ ಉಲ್ಲಂಘಿಸುತ್ತವೆ. ಅನೇಕ ಶೃಂಗಾರ ಸಾಧನಗಳು ಕ್ಯಾನ್ಸರ್ ಹುಟ್ಟುಹಾಕುವ ಸಾಧ್ಯತೆಗಳಿದ್ದರೂ ಈ ಉದ್ಯಮವು ತಮಗಿರುವ ರಾಜಕೀಯ ಹಾಗೂ ಆರ್ಥಿಕ ಸವಲತ್ತುಗಳಿಂದ ಇಂತಹ ಸಂಶೋಧನೆಗಳು ನಡೆಯದಂತೆ ನೋಡಿಕೊಳ್ಳುತ್ತವೆ. ಲಾಭ ಗಳಿಕೆಯ ಕಡಿತ, ವಿರೋಧಾತ್ಮಕ ಪ್ರಚಾರ ಹಾಗೂ ಯಾರಾದರೂ ಕೋರ್ಟು ಕಛೇರಿ ಮೊರೆ ಹೋಗುವುದು ಇಂತಹ ಪ್ರಸಂಗಗಳನ್ನು ಈ ಮೂಲಕ ತಪ್ಪಿಸುವುದಕ್ಕೆ ಅವರು ಪ್ರಯತ್ನಿಸುತ್ತಾರೆ.

13-1-85ರ ಟೆಲಿಗ್ರಾಫ್ ಪತ್ರಿಕೆಯಲ್ಲಿ ಪ್ರಕಟವಾದ ವರದಿಯಂತೆ ರೆವಲಾನ್ ಮತ್ತು ಚಾನಲ್ ತಯಾರಿಸುವ ಚಾರ್ಲಿ ಮತ್ತು ನಂಬರ್-5 ಎನ್ನುವ ಪರ್ಫ್ಯೂಂ ತಯಾರಿಕೆಯಲ್ಲಿ - ಮೊಜಾಂಬಿಕ್‌ನ ಕೋಸ್ಟಲ್‌ನಲ್ಲಿ ಬರುವ ಕೊಮೊರೋಸ್ ದ್ವೀಪದ ಇಸ್ಲಾಮಿಕ್ ರಿಪಬ್ಲಿಕ್ ಪ್ರದೇಶದಲ್ಲಿ ಮೇಲ್ಮಣ್ಣಿನಲ್ಲಿ ತೀವ್ರ ಸವಕಳಿ ಉಂಟಾಗಿದೆ ಎನ್ನಲಾಗಿದೆ. ಈ ಪರ್ಫ್ಯೂಮ್‌ಗಳು ಈ ದ್ವೀಪದಲ್ಲಿರುವ ಅತ್ಯುತ್ತಮ ತಳಿಯ ಹೂವುಗಳಿಂದ ತಯಾರಿಸಲ್ಪಡುತ್ತವೆ. ಈ ಹೂವುಗಳು, 'ಯ್ಲಾಂಗ್-ಯ್ಲಾಂಗ್' ಎನ್ನುವ ಮರಗಳಿಂದ ದೊರೆಯುತ್ತವೆ. ಅತ್ಯುತ್ತಮ ತಳಿಯಲ್ಲದುದನ್ನು ಸೋಪಿನ ತಯಾರಿಕೆಗೆ ಬಳಸಲಾಗುತ್ತದೆ. ಈ ಹೂವುಗಳಿಂದ ದೊರೆಯುವ ಎಣ್ಣೆಯ ಬಳಕೆಗಾಗಿ ಹಾಗೂ ಸೌಂದರ್ಯ ಉದ್ದಿಮೆಯಿಂದ ಈ ಮರಕ್ಕೆ ಇರುವ ಬೇಡಿಕೆಯಿಂದಾಗಿ 1969 ಮತ್ತು 1974ರ ಮಧ್ಯದ ವರ್ಷಗಳಲ್ಲಿ 44%ನಷ್ಟು ಕಾಡಿನ ನಾಶವಾದದ್ದು ಕಂಡುಬರುತ್ತದೆ. ಇತರ ಕಡೆಗಳಲ್ಲಿ 69%ನಷ್ಟು ಕಾಡುಗಳು ನಾಶವಾಗಿವೆ. ಶೃಂಗಾರ ಸಾಧನಗಳು ಹೀಗೆ ಪರಿಸರದ ನಾಶಕ್ಕೆ ಕೂಡಾ ಮುಖ್ಯ ಪಾತ್ರ ವಹಿಸುತ್ತವೆ.

ಈ ಉದ್ದಿಮೆಯು ಮಹಿಳೆಯರು ಸೌಂದರ್ಯ ವರ್ಧಕಗಳನ್ನು ಬಳಸಲು ಪ್ರೇರೇಪಿಸುವುದರಿಂದ ಕಾಸ್‌ಮೆಟಿಕ್ ಸರ್ಜರಿಗೆ (ಸೌಂದರ್ಯ ಉದ್ದೀಪಿಸುವ ಶಸ್ತ್ರಚಿಕಿತ್ಸೆ) ಅತ್ಯಂತ ಬಲವಾದ ಬೇಡಿಕೆ ಕಂಡುಬರತೊಡಗಿದೆ. ಈ ರೀತಿಯ ಭ್ರಮೆಯ ಲೋಕದ ಸೌಂದರ್ಯ ಗ್ರಹಿಕೆಗೆ ತಳ್ಳಲ್ಪಡುವ ಮಹಿಳೆಯರು ಅತ್ಯಂತ ದುಬಾರಿಯಾದ ಈ ಸರ್ಜರಿಗೆ ತಮ್ಮನ್ನು ತಾವು ಒಡ್ಡಿಕೊಳ್ಳುತ್ತಾರೆ. ಹೆಂಗಸಿನ ಸೌಂದರ್ಯಕ್ಕೆ ಆಕೆಯ ದೇಹದ ರಚನೆ ಮುಖ್ಯ ಎನ್ನುವ ನಂಬಿಕೆ ಎಲ್ಲಾ ಸಂಸ್ಕೃತಿಗಳಲ್ಲೂ ಇದೆ. ಹಾಗಾಗಿ ಜಾಹಿರಾತಿನ ಮೂಲಕ ಸೌಂದರ್ಯ ಉದ್ಯಮವು ಹೆಂಗಸರಿಗೆ ಡಯಟ್ ಮಾಡಲು ನಿರ್ದೇಶಿಸುತ್ತದೆ. ನಿತ್ಯ ಜೀವನದಲ್ಲಿ ಬಳಸುವ ಆಹಾರಗಳನ್ನು ಹೆಂಗಸರು ನಿಯಂತ್ರಿಸುತ್ತಾ ಹೋಗುತ್ತಾರೆ. ದೇಹದ ಸಪೂರತೆಗಾಗಿ ಇಂದು ಹಲವಾರು ವಿಧಾನಗಳನ್ನು ಬಳಸಲಾಗುತ್ತಿದೆ. ಹಲವಾರು ಬಗೆಯ ಮೆಷಿನ್‌ಗಳು ಇಂದು ನಮ್ಮ ಸುತ್ತ-ಮುತ್ತ ಕಂಡು ಬರುತ್ತವೆ. ರೋಯಿಂಗ್ ಯಂತ್ರ, ಮೋಟರಿನ ಯಂತ್ರ, ಕಾಲಿನ ಸೈಕಲ್‌ಗಳು, ಬೆಲ್ಟ್ ಮಸಾಜ್ - ಹೀಗೆ ತಮ್ಮ ದೇಹದ ರಚನೆಯನ್ನು ಕಾಪಾಡಿ ಕೊಳ್ಳುವುದಕ್ಕೋಸ್ಕರ ಈ ಯಂತ್ರಗಳತ್ತ ಧಾವಿಸುವಂತೆ ಸೌಂದರ್ಯ ಉದ್ದಿಮೆಗಳು ಜಾಹೀರಾತಿನ ಮೂಲಕ ಮಹಿಳೆಯರನ್ನು ಪ್ರೇರೇಪಿಸುತ್ತವೆ.

ಕ್ರೀಮ್ಸ್, ಲೋಷನ್ಸ್, ಜೆಲ್ಸ್ ಹಾಗೂ ಲಿಪೋಸಕ್ಷನ್ ಸರ್ಜರಿ ಇಂದು ಹೆಂಗಸರಿಗೆ ವರವಾಗಿ ಪರಿಣಮಿಸಿವೆ ಎಂದು ಹೇಳಲಾಗುತ್ತಿದೆ. ಆದರೆ ಇದರ ಹಿಂದಿರುವ ಸತ್ಯಗಳೇ ಬೇರೆ. ನಮ್ಮ ದೇಹದ ಅನೇಕ ಮಡಿಕೆಗಳಲ್ಲಿ ಕೊಬ್ಬಿನ ಅಂಶ

ಇರುವುದು ತುಂಬಾ ಸಹಜವಾದದ್ದು ಹಾಗೂ ನಮ್ಮ ವಂಶವಾಹೀ ಅಂಶಗಳಿಂದ ನಿರ್ಧರಿತವಾಗುವಂತಹದು. ಇಂತಹ ಒಂದು ಸಹಜವಾದ ಪ್ರಕೃತಿಯ ದೇಹದಲ್ಲಿ ಯಾವುದೇ ಮಸಾಜ್, ವಿದ್ಯುತ್ತಿನ ಸ್ಟಿಮುಲೇಷನ್ ಅಥವಾ ಔಷಧಿಗಳು ತಾತ್ಕಾಲಿಕವಾಗಿ ಕೆಲವು ಬದಲಾವಣೆ ಉಂಟು ಮಾಡಬಹುದೇ ಹೊರತು ಶಾಶ್ವತವಾಗಿ ಅಲ್ಲ. ಅನುವಂಶಿಕವಾಗಿರುವ ಕೆಲವು ದೈಹಿಕ ರಚನೆಗಳನ್ನು ಯಾವುದೇ ಸೌಂದರ್ಯ ವರ್ಧಕ, ಸರ್ಜರಿ ಶಾಶ್ವತವಾಗಿ ಬದಲಾವಣೆ ಮಾಡುತ್ತದೆ ಎನ್ನುವ ತಪ್ಪು ಗ್ರಹಿಕೆಗಳನ್ನು ಸೌಂದರ್ಯ ಉದ್ದಿಮೆ ನಮಗೆ ನೀಡುತ್ತಲೇ ಇರುತ್ತದೆ.

ಲಿಪೋಸಕ್ಷನ್ ಸೌಂದರ್ಯವರ್ಧಕ ಸರ್ಜರಿಯಲ್ಲಿ ತೀವ್ರತೆರನಾದ ನೋವುಗಳಿರುತ್ತವೆ ಎಂಬ ಸಂಗತಿಯನ್ನು ಬಚ್ಚಿಡಲಾಗುತ್ತದೆ. ಈ ಸರ್ಜರಿಯ ನಂತರ ಮೊಲೆಗಳು ಬಿಗಿಯುತ್ತವೆ, ಹಾಗೂ ಕ್ಯಾನ್ಸರ್‌ನ ಸಾಧ್ಯತೆಗಳು ಅಧಿಕವಾಗಿರುತ್ತವೆ. ಈ ಸರ್ಜರಿ ಅತ್ಯಂತ ದುಬಾರಿ ಬೆಲೆಯದ್ದಾಗಿರುತ್ತದೆ. ಸರ್ಜರಿಯ ಮೂಲಕ ದೇಹದ ಒಂದು ಕಡೆ ಕೊಬ್ಬನ್ನು ಬಾಚಿದರೆ ಇದು ಚರ್ಮ, ಹೃದಯ, ಲಂಗ್ಸ್ ಇಂತಹ ಕಡೆಗಳಲ್ಲಿ ಕೊಬ್ಬು ಶೇಖರವಾಗಿಬಿಡುವ ಸಾಧ್ಯತೆಗಳಿರುತ್ತವೆ. ಆದಾಗ್ಯೂ ಈ ಸರ್ಜರಿ ಹೆಚ್ಚು ತೂಕವಿರುವವರಿಗೆ ಅನುಕೂಲ ಮತ್ತು ಇದರಲ್ಲಿ ಏನೂ ಅಪಾಯವಿಲ್ಲವೆಂದು ಸಾರಲಾಗುತ್ತದೆ. ಅಲ್ಪ-ಸ್ವಲ್ಪ ತೊಂದರೆಗಳಿಗೆಲ್ಲ ಸ್ತ್ರೀವಾದಿಗಳು

**ನಾಗರೀಕರು ಮತ್ತು ಕಾನೂನು** : 'ಸೌಂದರ್ಯ ಸಾಧಕಗಳು' ಎನ್ನುವುದನ್ನು 'ಡ್ರಗ್ ಅಂಡ್ ಕಾಸ್ಮೆಟಿಕ್ಸ್ ಆಕ್ಟ್ - 1940' ಅಡಿಯಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ : ಶುಭ್ರಗೊಳಿಸಲು, ಸುಂದರಗೊಳಿಸಲು, ಆಕರ್ಷಣೆ ಹೆಚ್ಚಿಸಲು ಇಲ್ಲವೇ ಭಿನ್ನವಾಗಿ ಕಾಣಲು ಮನುಷ್ಯ ದೇಹದ ಯಾವುದೇ ಭಾಗಕ್ಕೆ ಹಚ್ಚಿಕೊಳ್ಳಲು ಬಳಸುವ ಸಾಧನಗಳು. ಇದರಲ್ಲಿ ಸೋಪು ಸೇರುವುದಿಲ್ಲ.

ಚರ್ಮದೊಂದಿಗೆ ಸಂಪರ್ಕ ಪಡೆಯುವ ಬೆವರುವಾಸನೆ ನಿವಾರಕಗಳು, ಕೇಶಾಂಜನಗಳು, ತುಟಿ ಬಣ್ಣಗಳು ಮತ್ತು ಉಗುರು ಬಣ್ಣಗಳೇ ಮುಂತಾದ ಸಾಮಗ್ರಿಗಳ ಬಳಕೆಯಿಂದ ಚರ್ಮದ ಊತದ ಅಪಾಯ ಯಾವಾಗಲೂ ಇದೆ ಎಂದು ಈ ಕಾಯಿದೆ ಹೇಳುತ್ತದೆ. ಈ ಕಾಯಿದೆಯ 17ನೇ ಪರಿಚ್ಛೇದ, ಎಂತಹ ಸನ್ನಿವೇಶಗಳಡಿ ಒಂದು ಸೌಂದರ್ಯ ಸಾಧಕವನ್ನು ಮಾರಾಟ ಯೋಗ್ಯವಲ್ಲವೆಂದು ಪರಿಗಣಿಸಲಾಗುತ್ತದೆ ಎಂದು ಹೇಳುತ್ತದೆ. 18 ಪರಿಚ್ಛೇದ ಕೀಳು ಗುಣಮಟ್ಟದ ಸೌಂದರ್ಯ ಸಾಧಕಗಳ ಮೇಲೆ ನಿಷೇಧ ಹೇರುತ್ತದೆ. ಇಂತಹ ಕೀಳುಮಟ್ಟದ ಸಾಮಗ್ರಿಗಳ ತಯಾರಿಕೆಯಾಗಲೀ, ದಾಸ್ತಾನಾಗಲೀ, ಮಾರಾಟವಾಗಲೀ ಶಿಕ್ಷಾರ್ಹ.

ಯಾವುದೇ ಸೌಂದರ್ಯ ಸಾಧಕದ ವಿತರಣೆ ಮಾಡುವವರು ರಾಜ್ಯ ಇಲ್ಲವೇ ಕೇಂದ್ರ ಸರ್ಕಾರದಿಂದ ನೇಮಿತರಾಗಿರುವ ಇನ್ಸ್‌ಪೆಕ್ಟರರಿಗೆ ಅಧಿಕೃತವಾಗಿ ವಿತರಣೆಯ ಬಗ್ಗೆ ಹೇಳಬೇಕೆನ್ನುವುದು 18-A ಪರಿಚ್ಛೇದದಲ್ಲಿದೆ. ಹೀಗೆ ಮಾಡದೇ ಹೋದವರ ಮೇಲೆ ಸೂಕ್ತ ಕ್ರಮವಾಗಿ ಒಂದು ವರ್ಷದವರೆಗೂ ಜೈಲು ಶಿಕ್ಷೆ ಇಲ್ಲವೇ 500 ರೂಗಳವರೆಗೆ ದಂಡ ವಿಧಿಸುವ ಬಗ್ಗೆ 27-A ಪರಿಚ್ಛೇದ ಹೇಳುತ್ತದೆ.

The citizen for toxic free marin, 1988 ಕೈಗೊಂಡ ಅಧ್ಯಯನ ಅನೇಕ ಸುವಾಸಿತ ರಾಸಾಯನಿಕಗಳು ವಿಷಕಾರೀ ಎಂಬಂಶವನ್ನು ಹೊರಗೆಡುಹಿದೆ. ಇವುಗಳಿಂದ ಕ್ಯಾನ್ಸರ್, ದೈಹಿಕ ವ್ಯತ್ಯಾಸಗಳು, ಸಂತಾನ ಸಂಬಂಧೀ ಸಮಸ್ಯೆಗಳು, ನಂಜಾಗುವಿಕೆ, ನರಕೋಶದಲ್ಲಿ ಅಸ್ತವ್ಯಸ್ಥೆ ತಲೆದೋರುತ್ತವೆ. ಕಂಕುಳಲ್ಲಿ ಬೆವರು ವಾಸನೆ ನಿವಾರಣೆಗೆ ಬಳಸುವ ಸ್ಪ್ರೇಗಳು ಸ್ತನ ಕ್ಯಾನ್ಸರಿನ ಸಾಧ್ಯತೆಗಳನ್ನು ತೀವ್ರವಾಗಿ ಹೆಚ್ಚಿಸುತ್ತವೆ. ಸುವಾಸಿತಗಳಲ್ಲಿ ಇರುವ ಇತರ ವಿಷಕಾರೀ ರಾಸಾಯನಿಕಗಳೆಂದರೆ, ಇಥನಾಲ್, ಬೆನ್‌ಜೀನ್ ಉತ್ಪಾದಕಗಳು, ಅಸಿಟೋನ್, ಫಾರ್‌ಮಾಲ್‌ಡಿಹೈಡ್, ಮಿಥಲೀನ್ ಕ್ಲೋರೈಡ್ ಮತ್ತು ಲಿಮೊನಿನ್. ಪರೀಕ್ಷೆಗೊಳಪಡಿಸಿದ ಎಲ್ಲ ಸುವಾಸಿತಗಳ ಸ್ಯಾಂಪಲ್‌ಗಳಲ್ಲಿ Toluene ಎನ್ನುವ ವಿಷಕಾರೀ ದ್ರಾವಕ ಇರುವುದು ಕಂಡುಬಂದಿದೆ. ಇದು ಕ್ಯಾನ್ಸರ್ ತರುತ್ತದೆ, ಹುಟ್ಟುವ ಮಕ್ಕಳಲ್ಲಿ ಅಂಗವಿಕಲತೆ ಉಂಟು ಮಾಡುತ್ತದೆ ಮತ್ತು ನರಕೋಶಕ್ಕೆ ಅಪಾಯಕಾರಿ ಎನ್ನುವುದು ಸಾಬೀತಾಗಿದೆ. ಇದನ್ನು ವಿನಾಶಕಾರೀ ತ್ಯಾಜ್ಯವಸ್ತು ಎಂದು ಘೋಷಿಸಲಾಗಿದೆ. ರೆಮಲಾನ್ ಮತ್ತು ಕ್ಯುಟೆಕ್ಸ್‌ಗಳ ಬ್ರಾಂಡ್‌ಗಳಲ್ಲಿ Toluene ಇರುವುದನ್ನು ಅಧ್ಯಯನಗಳು ತೋರಿಸಿಕೊಟ್ಟಿವೆ.

ಗುಲ್ಲು ಎಬ್ಬಿಸುತ್ತಾರೆ ಎಂದು ಹೇಳಲಾಗುತ್ತದೆ. 'ದ ನ್ಯೂಯಾರ್ಕ್ ಟೈಮ್ಸ್' 1987ರಲ್ಲಿ 11 ಜನ ಮಹಿಳೆಯರು ಸರ್ಜರಿಯ ಸಂದರ್ಭದಲ್ಲಿ ಮಡಿದುದಾಗಿ ವರದಿ ಮಾಡಿದೆ. 1988ರಲ್ಲಿ ಯು. ಎಸ್. ನ ಕಾಂಗ್ರೆಸೆನಲ್ ಸಬ್ ಕಮಿಟಿಯು 20 ಜನ ಮಹಿಳೆಯರು ಮಡಿದುದಾಗಿ ವರದಿ ಮಾಡಿದೆ. 14-6-95ರಲ್ಲಿ 'ಏಷಿಯನ್ ಯೇಜ್' - 46 ವರ್ಷದ ಶೀಲಾ ಕನ್ನನ್ ಲಿಪೋಸಕ್ಷನ್ ಸರ್ಜರಿ ಆದ ಮೇಲೆ 1994ಮೇ 20ರಂದು ಮಡಿದುದಾಗಿ ವರದಿ ಮಾಡಿದೆ. ಆಕೆಗೆ ಆಪರೇಷನ್ ಮಾಡುವಾಗ 25 ಕೆ.ಜಿ. ಕೊಬ್ಬನ್ನು ವ್ಯಾಕ್ಯೂಮ್ ಪಂಪ್‌ನಿಂದ ತೆಗೆದುದಾಗಿ ಹೇಳಲಾಗಿದೆ. ಈ ಆಪರೇಷನ್‌ಗೆ ಆಕೆ 35,000 ರೂ. ಕೊಟ್ಟುದಾಗಿ ತಿಳಿದುಬಂದಿದೆ.

ಮಹಿಳೆಯರಲ್ಲಿ ವಯಸ್ಸಾಗುವುದರ ಬಗ್ಗೆ ಅನಗತ್ಯವಾದ ಭಯ, ಕಾತುರತೆ ಹುಟ್ಟಿಸಲಾಗುತ್ತದೆ. ಜಾಹಿರಾತಿನ ಮೂಲಕ ಆಕೆಯ ದಪ್ಪ ಹೊಟ್ಟೆ, ಮುಖದ ಮೈ, ಚರ್ಮದ ನೆರಿಗೆಗಳು, ಕಪ್ಪು ಪ್ಯಾಚ್‌ಗಳು, ಹೀಚು ಮೊಲೆಗಳು ಇಂತಹದರ ಬಗ್ಗೆ ಅನಗತ್ಯವಾದ ಕಾತರತೆಯನ್ನು ಹೆಚ್ಚಿಸುತ್ತದೆ. ಮೊಲೆಗಳ ಬಿಗಿಗೊಳಿಸುವ, ಗಾತ್ರ ಸರಿಗೊಳಿಸುವ ಸರ್ಜರಿಗಳು ಯು.ಎಸ್. ನಲ್ಲಿ ಇಂದು ಸರ್ವೇ ಸಾಮಾನ್ಯವಾಗಿವೆ. ಈ ಸರ್ಜರಿಗಳೊಳಗೆ ತಗಲು ಹಾಕಿಕೊಂಡಿರುವ ಸಮಸ್ಯೆಗಳ ಬಗ್ಗೆ ಈ ಸೌಂದರ್ಯ ಉದ್ದಿಮೆಯು ಯಾವುದೇ ಬೆಳಕನ್ನೂ ಚೆಲ್ಲುವುದಿಲ್ಲ.

ಹೆಂಗಸರ ಚರ್ಮ ಮೃದುವಾಗಿರಬೇಕೆಂದು ಅಪೇಕ್ಷಿಸಲಾಗುತ್ತದೆ. ಮುಖ, ಕೈ ಕಾಲುಗಳು ರೋಮರಹಿತವಾಗಿರಬೇಕೆಂಬ ನಿರೀಕ್ಷೆಯನ್ನು ಹೆಚ್ಚಿಸಲಾಗುತ್ತದೆ. ಇದಕ್ಕಾಗಿ ಶೇವಿಂಗ್ ಜೊತೆಗೆ ಆಪರೇಷನ್ ವಿಧಾನಗಳನ್ನು ಕೂಡಾ ಸೂಚಿಸಲಾಗುತ್ತದೆ. ಹುಬ್ಬುಗಳ ಕೂದಲಿನ ಬೇರುಗಳನ್ನೂ ತೆಗೆಯಲಾಗುತ್ತದೆ. ಅತ್ಯುತ್ತಮ ಚರ್ಮ ಹೊಂದಿರಬೇಕೆಂದು ಲೋಷನ್ಸ್, ಕ್ರೀಮ್ಸ್ ಇತ್ಯಾದಿಗಳನ್ನು ಬಳಸಲು ಪ್ರೇರೇಪಿಸಲಾಗುತ್ತದೆ.

ಈ ಎಲ್ಲಾ ವಿಧಾನಗಳೂ ಕೂಡಾ ಸಮಯ-ಶಕ್ತಿ-ಹಣವನ್ನು ವ್ಯಯಗೊಳಿಸುವಂತಹವುಗಳು. ಮಹಿಳೆಯನ್ನು ಕೆಳದರ್ಜೆಗೆ, ಗೃಹಬಂಧನಕ್ಕೆ ಒಳಗೊಳಿಸುವಂತಹವುಗಳು. ಇದನ್ನು ಸ್ತ್ರೀವಾದಿಗಳು ವಿರೋಧಿಸುತ್ತಾರೆ. ಒತ್ತಾಯಪೂರ್ವಕವಾಗಿರುವ ಈ 'ಹೆಣ್ತನದ ಸೌಂದರ್ಯ'ದ ಕಲ್ಪನೆಯಲ್ಲಿ - ಶೃಂಗಾರ ಸಾಧನದ ಬಹುರಾಷ್ಟ್ರೀಯ ಹಾಗೂ ರಾಷ್ಟ್ರೀಯ ಕಂಪನಿಗಳು ಪ್ರಸ್ತುತ ಸಂಸ್ಕೃತಿಯಲ್ಲಿನ ಪ್ರಚಲಿತ ಮೌಲ್ಯಗಳಿಂದಾಗಿ ಹೆಂಗಸರನ್ನು ಸುಲಭವಾಗಿ ತಮ್ಮ ಗ್ರಾಹಕರನ್ನಾಗಿಸಿಕೊಳ್ಳಲು ಹಲವಾರು ಹುನ್ನಾರಗಳನ್ನು ನಡೆಸುತ್ತಲೇ ಇರುತ್ತವೆ. ಸ್ತ್ರೀವಾದಿಗಳು ಇಂತಹ 'ಮಿಥ್'ಗಳನ್ನು ಒಡೆಯಲು ಪ್ರಯತ್ನಿಸುತ್ತಾರೆ. ಹಾಗಾಗಿಯೇ ಇಡಿಯಾಗಿ ಸಮಾಜ ಹೇರುವ ಇಂತಹ ಹೆಣ್ತನದ ಸೌಂದರ್ಯ 'ಮಾದರಿ'ಗಳನ್ನೇ ತಿರಸ್ಕರಿಸುವುದು ಅತ್ಯಂತ ಮುಖ್ಯವಾದ ಅಂಶವಾಗುತ್ತದೆ. ಯಾಕೆಂದರೆ ಸೌಂದರ್ಯ ಉದ್ದಿಮೆಗಳು ದೇಹದ ನಿಯಂತ್ರಣದ ಜೊತೆಗೆ ಮುಖದ ಅಭಿವ್ಯಕ್ತಿ, ನಿಯಂತ್ರಣಗಳನ್ನೂ ಕಲಿಸಿಕೊಡುತ್ತವೆ. 'ನೈಸ್' ಆಗಿರುವ ಮಹಿಳೆ ಲೂಸ್ ಹೆಂಗಸಿನ ತರಹ ನೇರ ಹಾಗೂ ಭಯ ರಹಿತವಾಗಿರಬಾರದು ಎಂದು ಹೇಳಿಕೊಡಲಾಗುತ್ತದೆ. ನಗು ಅವರ ಬಂಡವಾಳವಾಗಿರಬೇಕು. ತಕ್ಷಣ ಸೇವೆಗೆ ಸಿದ್ಧರಾಗಿರಬೇಕು ಇತ್ಯಾದಿ 'ಮಾದರಿ'ಗಳಿಂದ ಆಕೆ 'ನೈಸ್' ಆಗಿರಬೇಕು ಎಂಬುದನ್ನೂ ಕೂಡಾ ಈ ಉದ್ದಿಮೆಗಳು ಕಲಿಸಿಕೊಡುತ್ತವೆ. ಇಂತಹ 'ಮಾದರಿ'ಗಳನ್ನು ಸ್ತ್ರೀವಾದಿಗಳು ಗಟ್ಟಿಯಾಗಿಯೇ ವಿರೋಧಿಸುತ್ತಾರೆ.

ಸೌಂದರ್ಯ ವರ್ಧಕಗಳು ಹೆಣ್ಣಿನ ಸೌಂದರ್ಯವನ್ನು ಹೆಚ್ಚಿಸುತ್ತವೆ ಎಂದು ಹೇಳುವ ಈ ಉದ್ಯಮದ ಜಾಹಿರಾತುಗಳು ಅವುಗಳ ಅಪಾಯವನ್ನು ಕುರಿತು ಮಾತನಾಡುವುದೇ ಇಲ್ಲ. ಯಾವುದೇ ಜೀವಿಯ ದೈಹಿಕ ರಚನೆಗೆ ಅನುವಂಶೀಯತೆ ಕಾರಣವಾಗಿರುತ್ತವೆ. ದೇಹದಲ್ಲಿರುವ ಜೀನ್ಸ್‌ಗಳು ಕಾರಣವಾಗಿರುತ್ತವೆ. ಹಾಗಾಗಿ ಹೊರಗಿನ ಯಾವುದೇ ವಸ್ತುವೂ ದೇಹದ ಒಳಗೆ, ಚರ್ಮದ ಒಳಗಡೆ ನಡೆಯುವ ಕ್ರಿಯೆಯನ್ನು ತಪ್ಪಿಸಲಾರವು. ಯಾವುದೇ ಬದಲಾವಣೆಯೂ ತಾತ್ಕಾಲಿಕವಾದುದೇ ಹೊರತು ಶಾಶ್ವತವಾದುದಲ್ಲ. ಹಾರ್ಮೋನುಗಳಿಂದ ನಿರ್ಧರಿತವಾಗಿರುವ ಅಂಶಗಳು ಹೊರಗಡೆಯ ವಸ್ತುಗಳ ಬಳಕೆಯಿಂದ ಹೇಗೆ ಬದಲಾಗಲು ಸಾಧ್ಯ ಎನ್ನುವ ಪ್ರಶ್ನೆಯನ್ನು ಕುರಿತು ಮಹಿಳೆಯರು ಯೋಚಿಸಬೇಕು.

ಸೌಂದರ್ಯ ವರ್ಧಕಗಳು ಸುರಕ್ಷಿತ ಎನ್ನುವುದು ಅಪ್ಪಟ ಸುಳ್ಳಿನ ಸಂಗತಿ. ಕೂದಲಿನ ಬಣ್ಣಗಳಿಗೆ ಕೋಲ್-ಟಾರ್ ಡೈಗಳನ್ನು ಬಳಸಲಾಗುತ್ತಿದ್ದು ಅದರಲ್ಲಿ ಪೆಟ್ರೋಕೆಮಿಕಲ್ ಇರುತ್ತದೆ. ಇದರ ಬಗ್ಗೆಗಿನ ಅಧ್ಯಯನವೊಂದು ಇದನ್ನು ಬಳಸುವ 50% ಹೆಂಗಸರು ಕ್ಯಾನ್ಸರ್‌ಗೆ ಬಲಿಯಾಗುತ್ತಾರೆ ಎಂಬುದನ್ನು ತೋರಿಸಿಕೊಟ್ಟಿದೆ.

ಕೆಲ ವರ್ಷಗಳ ಹಿಂದೆ ದೆಹಲಿಯ 'ಆಲ್ ಇಂಡಿಯ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್' ಕೈಗೊಂಡ ವಿಸ್ತೃತ ಅಧ್ಯಯಗಳಿಂದ ಕೆಲ ಆತಂಕಕಾರೀ ಸತ್ಯಗಳು ಹೊರಬಂದವು. ಅದು ಪರೀಕ್ಷೆಗೆ ಒಳಪಡಿಸಿದ "ಸುರ್ಮಾ"ದ ಕೆಲ 28 ಸ್ಯಾಂಪಲ್‌ಗಳಲ್ಲಿ ಬಹು ಪ್ರಮಾಣದಲ್ಲಿ ಸತು (lead) ಇರುವುದು ಕಂಡುಬಂತು. ಒಂದು ಸ್ಯಾಂಪಲ್‌ನಲ್ಲಂತೂ ಸತುವಿನ ಪ್ರಮಾಣ 84.5% ಇತ್ತು. ಹಾಗೆಯೇ 1979ರಲ್ಲಿ "ಕನ್ಸ್ಯೂಮರ್ ಗಯಡೆನ್ಸ್ ಸೊಸೈಟಿ ಆಫ್ ಇಂಡಿಯಾ", ಹದಿಮೂರು ಬ್ರಾಂಡ್‌ಗಳ "ಸುರ್ಮಾ"ವನ್ನು ಪರೀಕ್ಷೆಗೊಳಪಡಿಸಿದಾಗ ಕೇವಲ ಒಂದನ್ನು ಹೊರತುಪಡಿಸಿ ಉಳಿದೆಲ್ಲದರಲ್ಲೂ 29.7%ನಿಂದ 85.7%ವರೆಗೆ ಸತು ಇದ್ದದ್ದು ಕಂಡು ಬಂತು.

ಲಂಡನ್ನಿನ 'ದ ಸಂಡೇ ಟೈಮ್ಸ್' ಪ್ರಾಯೋಜಿಸಿದ ಒಂದು ಅಧ್ಯಯನ, ಬಿಸಿಲಿನಿಂದ ಸಂರಕ್ಷಣೆ ನೀಡುವ ಚರ್ಮದ ಲೋಶನ್‌ಗಳ ಸುಳ್ಳು ಪ್ರತಿಪಾದನೆಗಳನ್ನು ಹೊರಗೆಡುಹಿತು. ತಾನು ಒದಗಿಸುವ ಸಂರಕ್ಷಣೆಗಿಂತ ಶೇ.75ರಷ್ಟು ಹೆಚ್ಚು ಹೇಳಿಕೊಳ್ಳುತ್ತಿದ್ದ ಇಂತಹ ಲೋಷನ್ ಬಳಕೆಯಿಂದ ಅನೇಕರು ತೀವ್ರ ಸುಟ್ಟ ಗಾಯಕ್ಕೆ ಬಲಿಯಾದರು. ಹ್ಯಾಂಪ್‌ಶಯರಿನ 6 ವರ್ಷದ ಬಾಲಕಿಯೊಬ್ಬಳು ಈ ಲೋಷನ್ ಬಳಸಿ, ಬಿಸಿಲು ತಾಪಕ್ಕೆ ಸಿಕ್ಕು, ಎರಡನೇ ಮಟ್ಟದ ಸುಟ್ಟ ಗಾಯಕ್ಕೆ ಬಲಿಯಾದಳು. ನಂತರ ಇದನ್ನು ತಯಾರಿಸುತ್ತಿದ್ದ ಕಂಪನಿಯ ಮೇಲೆ ದಂಡ ವಿಧಿಸುವುದೇ ಮುಂತಾದ ಕ್ರಮಗಳನ್ನು ಕೈಗೊಳ್ಳಲಾಯಿತು.

ಹೀಗೆ ಒತ್ತಾಯವಾಗಿ ಹೇರಲ್ಪಡುವ ಹೆಣ್ತನದ ಸೌಂದರ್ಯವನ್ನು ಬಿಟ್ಟುಕೊಡುವುದರ ಮೂಲಕ ನಾವು ನಮ್ಮ ಸ್ವಶಕ್ತಿಯ ಅರಿವುಗಳನ್ನು ಮೂಡಿಸಿಕೊಳ್ಳುವ ಪ್ರಯತ್ನಗಳನ್ನು ಹೆಚ್ಚು ಹೆಚ್ಚಾಗಿ ಮಾಡಬೇಕಾಗುತ್ತದೆ ಎಂದು ಸ್ತ್ರೀವಾದಿಗಳು ಬಲವಾಗಿ ನಂಬುತ್ತಾರೆ.

ಬ್ಯೂಯಿಟಿ ಪೆಜೆಂಟ್ಸ್‌ನ ಮಿಸ್ ಇಂಡಿಯ, ಮಿಸ್ ಯೂನಿವರ್ಸ್‌ನಂತಹ ಸ್ಪರ್ಧೆಗಳು ಅತ್ಯಂತ ಸುಂದರವಾದ ಹೆಂಗಸರನ್ನು ಆಯ್ಕೆ ಮಾಡುತ್ತವೆ ಎಂಬ ಅಪ್ಪಟವಾದ ಸುಳ್ಳನ್ನು ನಮಗೆ ಹೇಳಲಾಗುತ್ತಿದೆ. ಇದರ ನಿಜವಾದ ಉದ್ದೇಶವೇ ಬೇರೆ. ಈ ಸ್ಪರ್ಧೆಯನ್ನು ಪ್ರಾಯೋಜಿಸುವ ದೊಡ್ಡ ದೊಡ್ಡ ಉದ್ಯಮಗಳು ತಮ್ಮ ಸೌಂದರ್ಯ ವರ್ಧಕಗಳಿಗೆ ಬೇಡಿಕೆ ಹೆಚ್ಚಿಸಿಕೊಳ್ಳುವ ಹಾಗೂ ಮಾರ್ಕೆಟ್ ಉತ್ತಮಗೊಳಿಸಿಕೊಳ್ಳುವ ಮುಖ್ಯವಾದ ಉದ್ದೇಶಗಳನ್ನು ಹೊಂದಿರುತ್ತವೆ. ಹಾಗಾಗಿ ಮಾಧ್ಯಮದಲ್ಲಿ ಪ್ರಚಾರಕ್ಕೆ, ವಸ್ತುವಿನ ಮಾರುವಿಕೆಯ ತಂತ್ರವಾಗಿ ಈ 'ಸೌಂದರ್ಯ ಸ್ಪರ್ಧೆ'ಗಳನ್ನು ಬಳಸಿಕೊಳ್ಳುತ್ತವೆ ಎಂಬುದು ನಮಗೆ ನಿಮಗೆಲ್ಲರಿಗೂ ಅರ್ಥವಾದರೆ 'ಸೌಂದರ್ಯ -ಸ್ಪರ್ಧೆ'ಯ ಹಿಂದಿರುವ ನಿಜವಾದ ರಾಜಕೀಯದ ಹುನ್ನಾರಗಳು ಬೆಳಕಿಗೆ ಬರುತ್ತವೆ.

●

ಭಾರತದಲ್ಲಿ ಸೌಂದರ್ಯಸಾಧಕ ಕೈಗಾರಿಕೆ ಒಂದು ಸಾವಿರ ಕೋಟಿ ರೂಪಾಯಿಗಳ ಮೌಲ್ಯದ್ದು. ಅದರ ಉತ್ಪನ್ನವಾರು ವಿಂಗಡಣೆ ಈ ಕೆಳಕಂಡಂತಿದೆ :

ಟಾಲ್ಕ್ - 180 ಕೋಟಿ
ಶಾಂಪೂ - 130 ಕೋಟಿ
ಪುರುಷಾಲಂಕಾರಗಳು - 130 ಕೋಟಿ
ಶೃಂಗಾರ ವಸ್ತುಗಳು - 100 ಕೋಟಿ
ಚರ್ಮ ಲೇಪನಗಳು - 110 ಕೋಟಿ
ಕೂದಲ ಬಣ್ಣ - 25 ಕೋಟಿ
ಶೇವಿಂಗ್ ವಸ್ತುಗಳು - 300 ಕೋಟಿ

(1995, ಜನವರಿ)

# ಪರಿಪೂರ್ಣತೆಗಾಗಿ ತುಂಡರಿಸಲ್ಪಟ್ಟವರು, ಎರಕಕ್ಕೆ ಹೊಯ್ಯಲ್ಪಟ್ಟವರು

'ಮಿಸ್ ವರ್ಲ್ಡ್' 'ಮಿಸ್ ಯೂನಿವರ್ಸ್'ಗಳನ್ನು ಗೆಲ್ಲುವ ಕೆಲ ಸಮ್ಮೋಹನಾಂಗಿಯನ್ನು ರೂಪಿಸುವಲ್ಲಿ ಅವರ 'ಸೇವೆ'ಗೆ ಕಂಕಣಬದ್ಧರಾದವರು ಕೇವಲ ಪ್ರಸಾಧನ ಕಲಾವಿದರು, ವಸ್ತ್ರ ವಿನ್ಯಾಸಕರು, ಸಾರ್ವಜನಿಕ ಸಂಪರ್ಕ ತಜ್ಞರು ಮಾತ್ರವಲ್ಲ, ದಂತ ವೈದ್ಯರು, ಪ್ಲಾಸ್ಟಿಕ್ ಸರ್ಜನ್‌ಗಳು ಕೂಡ ಇವರನ್ನು 'ತಯಾರಿಸುವಲ್ಲಿ' ಬಹುಮುಖ್ಯ ಪಾತ್ರ ವಹಿಸುತ್ತಾರೆ. ಇಪ್ಪತ್ತೊಂದು ಮಿಲಿಯ ಜನಸಂಖ್ಯೆಯಿರುವ ವೆನೆಸುಲಾದಂತಹ ದೇಶ ಮೂವರು 'ಮಿಸ್ ಯೂನಿವರ್ಸ್'ಗಳನ್ನು, ನಾಲ್ವರು 'ಮಿಸ್ ವರ್ಲ್ಡ್'ಗಳನ್ನು ಕಳೆದ 15 ವರ್ಷಗಳಲ್ಲಿ ರೂಪಿಸಿ ಬೇರೆಲ್ಲ ದೇಶಗಳಿಗಿಂತ ಈ ನಿಟ್ಟಿನಲ್ಲಿ ದಾಪುಗಾಲು ಹಾಕುತ್ತಿರುವುದರ ಗುಟ್ಟಾದರೂ ಏನು? ಇದನ್ನು ಕಂಡುಹಿಡಿಯಲು ಹೊರಟ 'ಕ್ರಿಶ್ಚಿಯನ್ ಸೈನ್ಸ್ ಮಾನಿಟರ್'ನ ಸಂಶೋಧಕರೊಬ್ಬರು ಸೌಂದರ್ಯ ಸ್ಪರ್ಧೆಗಳಲ್ಲಿ ಕಂಡದ್ದು : "ತೀರ್ಪುಗಾರರು, ಮುಖ್ಯವಾಗಿ ಗಂಡಸರಿಂದ ಪರಿಪೂರ್ಣ ಹೆಂಗಸರೆಂದು ಪರಿಗಣಿಸಲ್ಪಡಲಿಕ್ಕಾಗಿ ತಮ್ಮನ್ನು ತುಂಡರಿಸಿಕೊಂಡು, ತಿದ್ದಿ-ತೀಡಿ ಕಡೆಯಲ್ಪಟ್ಟು, ಎರಕಕ್ಕೆ ಹೊಯ್ಯಲ್ಪಟ್ಟ ಹೆಂಗಸರ ದಂಡನ್ನು".

ತೀರ್ಪುಗಾರರಿಗೆ ಬೇಕಾದ್ದು ಏನು ಮತ್ತು ಅದನ್ನು ಪೂರೈಸಲು ಹೆಂಗಸರನ್ನು ಹೇಗೆ ಸಜ್ಜುಗೊಳಿಸಬೇಕು ಎಂಬುದನ್ನು ಚೆನ್ನಾಗಿ ಬಲ್ಲ ಕೈಗಾರಿಕೆಯ ಫಲವಾದದ್ದೇ ಇಲ್ಲಿ ಯಶಸ್ಸು.

ಸೌಂದರ್ಯ ರಾಣಿಯರಾಗಬಲ್ಲವರನ್ನು ಕಂಡುಹಿಡಿಯುವಲ್ಲಿ ನಿಪುಣತೆ ಸಾಧಿಸಿರುವ 'ಮಿಸ್ ವೆನೆಸುಲಾ ಅಕೆಡಮಿ" ಎನ್ನುವ ಕಂಪನಿಯ ಆಸ್ಮೆಲ್‌ಸೌಸ ಎನ್ನುವವರು ಹೊಸ ಮುಖಗಳಿಗಾಗಿ ಹುಡುಕಾಡುತ್ತಾ ನೈಟ್ ಕ್ಲಬ್‌ಗಳಲ್ಲಿ, ಸೂಪರ್ ಮಾರ್ಕೆಟ್‌ಗಳಲ್ಲಿ, ಬೀಚ್‌ಗಳಲ್ಲಿ, ಬಸ್ ಸ್ಟ್ಯಾಂಡ್‌ಗಳಲ್ಲಿ ಅಲೆಯುತ್ತಾರೆ. ಅವರೇಳುತ್ತಾರೆ : "ನಾನು ಸವಿಯಾದ, ನವಿರಾದ, ಆಕ್ರಮಣ ಶೀಲೆಯಲ್ಲದ, ಬಲಶಾಲಿಯಲ್ಲದ, ಆದರೆ ಗುಣಾತ್ಮಕ ಧೋರಣೆಯುಳ್ಳ, ಕೊಂಚ ಅಭಿನಯ ಚತುರೆಯೂ ಆಗಿರಬಲ್ಲ ಹುಡುಗಿಯರಿಗಾಗಿ ಹುಡುಕುತ್ತೇನೆ". ಈ 'ಕಚ್ಚಾ ವಜ್ರಗಳು' ದೊರಕಿದ ನಂತರ, ಕಾರ್ಖಾನೆಯೋಪಾದಿಯಲ್ಲಿ ಅವರನ್ನು ಎರಕಕ್ಕೆ ಹೊಯ್ದು, ಪಾಲಿಷ್ ಮಾಡಿ ಹೊಸ ಜಯಶಾಲಿಗಳ ತಯಾರಿಕೆಯಲ್ಲಿ ತೊಡಗುತ್ತಾರೆ.

ಸೌಂದರ್ಯ ರಾಣಿಯಾಗಬಲ್ಲ ಸಾಮರ್ಥ್ಯದ ಹಿಂಡು ಹುಡುಗಿಯರನ್ನು ಕಲೆ ಹಾಕಿದ ನಂತರ ಸೌಸ ಅವರನ್ನು "ವಿಚಾರಿಸಿಕೊಳ್ಳುವವರ" ಮುಂದೆ ಹಾಜರು ಪಡಿಸುತ್ತಾರೆ. ದನದ ಜಾತ್ರೆಯಲ್ಲಿ ಪರೀಕ್ಷಿಸಿ ಕೊಳ್ಳುವ ರೈತರ ಪಾತ್ರವನ್ನೇ ಇವರು ಇಲ್ಲಿ ನಿರ್ವಹಿಸುವುದು.

ಒಬ್ಬ ಹುಡುಗಿಯ ಕಾಲಿನ ಮಾಂಸವನ್ನು ಸೌಸ ಹಿಸುಕಿ ನೋಡುತ್ತಾನೆ. ಅಷ್ಟರಲ್ಲೇ ಪ್ಲಾಸ್ಟಿಕ್ ಸರ್ಜನನೊಬ್ಬ ಅವಳ ಮುಖವನ್ನು ಎತ್ತಿ ಹಿಡಿದು ಎಲ್ಲ ಅವಯವಗಳ ಮೇಲೆ ಕೈಯಾಡಿಸುತ್ತಾ ಉದ್ಗರಿಸುತ್ತಾನೆ : "ಇವಳ ಗಲ್ಲವನ್ನು ನೋಡಿ, ಎಷ್ಟು ಚಂದವಾಗಿ ಹೊರಚಾಚಿಕೊಂಡಿದೆ"!.

ಆಯ್ಕೆಗೊಂಡ ಕೆಲವೇ ಹುಡುಗಿಯರು ಆರು ತಿಂಗಳ ತೀವ್ರಾಭ್ಯಾಸದ ತರಬೇತಿಗೆ ಪಕ್ಕಾಗುತ್ತಾರೆ. ತನ್ನನ್ನು ತಾನು ತೋರಿಸಿಕೊಳ್ಳುವುದು, ವಾಕ್ಚಟುತ್ವ, ಮಾಡೆಲಿಂಗ್ ಮತ್ತು ಪ್ರತಿ ದಿನ ಮೂರು ಗಂಟೆ ಜಿಮ್ ತರಗತಿಗಳು ಇವೆಲ್ಲ ಸೇರುತ್ತವೆ. ಈ ಅವಧಿಯಲ್ಲಿ ಬಹುತೇಕ ಹುಡುಗಿಯರಿಗೆ ಪ್ಲಾಸ್ಟಿಕ್ ಸರ್ಜರಿಯ ಮೂಲಕ 'ಸಣ್ಣ-ಪುಟ್ಟ ಅಡ್‌ಜೆಸ್ಟ್‌ಮೆಂಟ್'ಗಳನ್ನು ಮಾಡಲಾಗುತ್ತೆ. ಕಳೆದ ವರ್ಷ ಇದ್ದ 26 ಹುಡುಗಿಯರ ಪೈಕಿ 17 ಜನರಿಗೆ ಸರಿಯಾಗಿ ಹಲ್ಲು ಕಿರಿದು ಮುಗುಳ್ನಗಲು ಸಾಧ್ಯವಾಗುವಂತೆ ವಸಡಿನ ಚಿಕಿತ್ಸೆ ಮಾಡಲಾಯಿತು. ಕೆಲವರಿಗೆ ಪ್ಲಾಸ್ಟಿಕ್ ಸರ್ಜರಿ!

ಪ್ಲಾಸ್ಟಿಕ್ ಸರ್ಜರಿ ತಜ್ಞ ಡಾ. ಪೆರಿನಿಯವರು ಹುಡುಗಿಯರ ದೇಹದಲ್ಲಿ ಅನೇಕಾನೇಕ ಬದಲಾವಣೆಗಳನ್ನು ಮಾಡುತ್ತಾರೆ. ಮೂಗು ಚೂಪುಗೊಳಿಸುವುದು, ತುಟಿ ವೃದ್ಧಿಸುವುದು, ಸ್ತನ ತುಂಬುವುದು, ಗಲ್ಲದ ಮರು ರಚನೆ, ಹುಬ್ಬು ಏರಿಸುವುದು ಮತ್ತು ಕೊಬ್ಬು ಕಳೆಯುವುದು ಇದೆಲ್ಲ

(26ನೇ ಪುಟಕ್ಕೆ ಮುಂದುವರಿದಿದೆ)

## ಸೌಂದರ್ಯ ಸ್ಪರ್ಧೆ ಸರ್ಕಸ್



ಸೌಂದರ್ಯ ಸ್ಪರ್ಧೆಗಳನ್ನು ನಡೆಸುವ ವಿಚಾರ ಪ್ರಾರಂಭವಾಗಿದ್ದು 19ನೇ ಶತಮಾನದ ಕೊನೆಯಲ್ಲಿ, ಅಮೆರಿಕಾದಲ್ಲಿ. ದಿನ ಪತ್ರಿಕೆಗಳ ಮಾರಾಟ ಹೆಚ್ಚಿಸಲು ಹಾಗೂ ಉತ್ಸವಗಳಿಗೆ, ಪ್ರಚಾರದ ಸ್ಟಂಟ್ ಆಗಿ ಬಳಸಲು, ಈ ಸ್ಪರ್ಧೆಗಳನ್ನು ಪ್ರಾರಂಭಿಸಲಾಯಿತು. 1920ರಲ್ಲಿ, ಸಮುದ್ರ ತೀರದ ಸೌಂದರ್ಯ ಸ್ಪರ್ಧೆಯನ್ನು ಔಪಚಾರಿಕವಾಗಿ ನಡೆಯಲಾಯಿತು. ಮುಂದೆ ಇದು ಒಂದು Standard ನಿಯಮವಾಯಿತು. ಮುಂಚಿನ ವರ್ಷಗಳಲ್ಲಿ; ಸೌಂದರ್ಯ ಸ್ಪರ್ಧೆಯಲ್ಲಿ ಭಾಗವಹಿಸುವವರು ತಮ್ಮ ಸ್ವಾಭಾವಿಕವಾದ, ಓಯ್ಯಾರವಲ್ಲದ (unsophisticated) ಗುಣಗಳಿಗಾಗಿ ಮಾನ್ಯತೆ ಪಡೆಯುತ್ತಿದ್ದರು. ಆದರೆ ಅದೇ ಸಮಯದಲ್ಲಿ ಹೊಸತನಕ್ಕೆ, ಪ್ರದರ್ಶನದ ಉತ್ಸಾಹಕ್ಕೆ ಸಂಕೇತವೆಂದು, ಅದೇ ಹೊಸದಾಗಿ ಫ್ಯಾಶನ್ ಸಮಾಜಕ್ಕೆ ಕಾಲಿಡುತ್ತಿದ್ದ ಎಳೆ ಹುಡುಗಿಯರಿಂದ ಮಾನ್ಯತೆ ಪಡೆಯುತ್ತಿದ್ದರು. ತಮ್ಮ ವರ್ತನೆ ಹಾಗೂ ಉಡುಪಿನಿಂದಾಗಿ, ಸಾಂಪ್ರದಾಯಿಕ ನಿಯಮಗಳಿಂದ ಸ್ವಾತಂತ್ರ್ಯ ಬಯಸುವ ದಿಟ್ಟೆಯರೆಂದು ಪರಿಗಣಿಸಲ್ಪಡುತ್ತಿದ್ದರು. ಈ ರೀತಿ ಪ್ರಾರಂಭವಾದ ಸೌಂದರ್ಯ ಸ್ಪರ್ಧೆಗಳು, ಬೆಳೆಯುತ್ತಾ ಹೋಗಿ, ಪ್ರತಿಷ್ಠಿತವೆನಿಸಿಕೊಂಡವು. ಕೆಲವು ಪ್ರತಿಷ್ಠಿತ, ಹಣ ದೋಚುವ ವಿಧಾನಗಳಾದವು.

ಅತ್ಯಂತ ಸುಂದರವಾದ ಹೆಂಗಸನ್ನು ಆಯ್ಕೆ ಮಾಡುವುದು ಈ ಸ್ಪರ್ಧೆಗಳ ಉದ್ದೇಶ. ಈ ಸೌಂದರ್ಯ ಸ್ಪರ್ಧೆಗಳ ಮಾನದಂಡವೆಂದರೆ ದರ್ಜಿಯ ಇಂಚುಪಟ್ಟಿ! ಅಸ್ವಾಭಾವಿಕವಾದ ಎದೆಯ ಸುತ್ತಳತೆ 35 ಅಂಗುಲ, 20ಯ ಭುಜಗಳು, ಸಣ್ಣ ಸೊಂಟ, ಎದೆಯಳತೆಗಿಂತ ದೊಡ್ಡದಾದ ನಿತಂಬಗಳು, ಬೆಕ್ಕಿನ ನಡಿಗೆಯಲ್ಲಿ 3ರಿಂದ 5 ಇಂಚಿನ ಎತ್ತರದ ಚಪ್ಪಲಿ ತೊಟ್ಟು, ಬಣ್ಣ ಬಣ್ಣದ ಅತ್ಯಾಧುನಿಕ ಬಟ್ಟೆಗಳನ್ನು ತೊಟ್ಟು, ಜಗಮಗ ಬೆಳಕಿನಲ್ಲಿ, ಮೆಲುದನಿಯ ಸಂಗೀತಕ್ಕೆ ತಕ್ಕಂತೆ ಹತ್ತಾರುಬಾರಿ ನಡೆದಾಡುತ್ತಾರೆ. ಗಂಡುಗಳ ಸುಪರ್ದಿನಲ್ಲಿ 'ಸುಂದರ' ಎಂದು ಕರೆಸಿಕೊಳ್ಳುವ ಮೈಗಳ ಬೆಕ್ಕಿನ ನಡಿಗೆ! ಜೊತೆಗೆ ಹೆಣ್ತನದ ಅಹಂ, ಒನಪನ್ನು ಹೊಗಳುವ ಪ್ರೇಕ್ಷಕರ ಗುಸು ಗುಸು. ಯಾವುದೇ ಅವಮಾನ, ಪಾಪ ಪ್ರಜ್ಞೆಯಿಲ್ಲದೆ, ಹೆಣ್ಣಿನ ಮೈ ನೋಡುವ ಅವಕಾಶ ಗಂಡಸರಿಗೆ! ಅದೂ ಕಾನೂನುಬದ್ಧವಾಗಿ. ಸುಂದರಿಯರ ಎಲ್ಲಾ ಭಾಗಗಳ ಬಗ್ಗೆಯೂ ಆರಾಮವಾಗಿ ಮಾತನಾಡಲು ಯಾವ ಕಾನೂನು ಅಡ್ಡಿ ಬರುವುದಿಲ್ಲ, ಸುಂದರಿಯರ ನಡಿಗೆ, ಸೊಂಟ, ಸ್ತನ ಎಲ್ಲದರ ಬಗ್ಗೆಯು ಗಂಡಸರು ಪ್ರತಿಕ್ರಿಯಿಸಿ ಗಮನ ಸೆಳೆಯುವುದು ಸಾಮಾನ್ಯ.

ಸ್ಥಳೀಯವಾಗಿ ಆರಂಭವಾದ ಸೌಂದರ್ಯ ಸ್ಪರ್ಧೆಗಳು ಅಂತರರಾಷ್ಟ್ರೀಯ ನಾಯಿಕೊಡೆಗಳಂತೆ ಹೆಚ್ಚಾಗುತ್ತಿವೆ. ಅವುಗಳಲ್ಲಿ ಹೆಚ್ಚು ಪರಿಚಿತ, ಪ್ರತಿಷ್ಠಿತ ಸ್ಪರ್ಧೆಗಳೆಂದರೆ ಮಿಸ್ ಅಮೆರಿಕ-1921, ಸೆ. 7ರಂದು, ನ್ಯೂಜರ್ಸಿಯ ಅಟ್ಲಾಂಟಿಕ್ ಸಿಟಿಯಲ್ಲಿ ಪ್ರಾರಂಭವಾಯಿತು. ಸಮುದ್ರ ತೀರದ ಸೌಂದರ್ಯ ಸ್ಪರ್ಧೆಯೆಂದು ಪ್ರಾರಂಭವಾದದ್ದು ಮುಂದೆ ಒಂದು ರಾಷ್ಟ್ರೀಯ ಸಂಪ್ರದಾಯವಾಗಿ ಮಾರ್ಪಾಡಾಯಿತು. ಈಗ ಅದು ಅಲ್ಲಿನ ಸಂಸ್ಕೃತಿಯ, ಅಲ್ಲಿನ ಜನರ ಕನಸಿನ ಭಾಗವೇ ಆಗಿ ಹೋಗಿದೆ. ರಾಷ್ಟ್ರೀಯ ಮಟ್ಟದಲ್ಲಿ, ಮೊದಲ ಸ್ಥಾನ ಪಡೆದಿದ್ದ ಬೇಸ್‌ಬಾಲ್, ಫುಟ್‌ಬಾಲ್‌ಗಳನ್ನು ಹಿಂದೆ ಹಾಕಿದೆ. ಸ್ಪರ್ಧೆಯನ್ನು ಆಯೋಜಿಸುವವರು ದೊಡ್ಡ ಕೈಗಾರಿಕೋದ್ಯಮಿಗಳು, ವ್ಯಾಪಾರಿಗಳು. ಅವುಗಳಲ್ಲಿ ಬಿಯಟ್ರೈಸ್ ಫುಡ್ಸ್ ಹಾಗೂ ಬೆಲ್ಗೆಟ್ ಎಂಬ ದೈತ್ಯ ಕಂಪೆನಿಗಳಿವೆ. ಲಾಭ ತಮ್ಮ ಉದ್ದೇಶವಲ್ಲವೆಂದು ಹೇಳಿಕೊಳ್ಳುವ ಸ್ಪರ್ಧೆಯವರು 1983ರಲ್ಲಿ ಕೋಕೋಕೋಲಾದವರ ಕೆಲವೇ ಗಳಿಗೆಯ ಪ್ರದರ್ಶನಕ್ಕೆಂದು (ಸ್ಪರ್ಧೆಯಲ್ಲಿ) ಕೇವಲ 2,500 ಡಾಲರ್ ಪಡೆದಿದ್ದರು. ಈ ಸ್ಪರ್ಧೆಯಲ್ಲದೆ, ಅಮೆರಿಕಾದ ವಾಣಿಜ್ಯ ಪ್ರಪಂಚದ ಪ್ರತಿಯೊಂದು ವಸ್ತುವು ತನ್ನದೆ ರಾಣಿಯರು, ರಾಜಕುಮಾರಿಯರು ಅಥವಾ ಪರಿಚಾರಿಕೆಯರನ್ನು ಹೊಂದಿವೆ, ಬಾಳೆಹಣ್ಣಿನಿಂದ ಬೈಸಿಕಲ್‌ವರೆಗೂ!

ಮಿಸ್ ವರ್ಲ್ಡ್ : 1951ರಲ್ಲಿ ಆರಂಭವಾದ ಈ ಸ್ಪರ್ಧೆಯ ಪಿತಾಮಹರೆಂದರೆ ಎರಿಕ್ ಮಾರ್ಲಿ ಹಾಗು ಅವನ ಹೆಂಡತಿ. ಈ ಜೂಜಿನ ಶೇರಿನಲ್ಲಿ ಇವರಿಬ್ಬರ ಪಾಲು ಶೇ. 59. ಈ ಸಂಸ್ಥೆಯ ಒಟ್ಟು ಮೌಲ್ಯ 4 ಮಿಲಿಯನ್ ಪೌಂಡ್‌ಗಳು. ಸ್ಪರ್ಧೆಯ ನೆಲೆ ಲಂಡನ್‌ನಲ್ಲಾದರೆ, ಸ್ಪರ್ಧೆ ಪ್ರತ್ಯಕ್ಷವಾಗಿ ನಡೆಯುವುದು ರಾಯಲ್ ಆಲ್ಬರ್ಟ್ ಹಾಲ್‌ನಲ್ಲಿ. ಪ್ರಾರಂಭದ ವರ್ಷಗಳಲ್ಲಿ ಚರ್ಮದ ಬಣ್ಣ, ವಿಶಿಷ್ಟ (ವ್ಯವಸ್ಥಾಪಕರ ಪ್ರಕಾರ) ಜನಾಂಗ, ದೈಹಿಕ ಲಕ್ಷಣಗಳೇ ಸ್ಪರ್ಧೆ ಗೆಲ್ಲಲು ಮಾನದಂಡಗಳಾಗಿದ್ದವು. ವರ್ಷಾನು ಕ್ರಮದಲ್ಲಿ ಕಪ್ಪು ಹಾಗು ಉಳಿದ ಜನಾಂಗಗಳಿಂದ ಬಂದವರು ಸ್ಪರ್ಧೆಯಲ್ಲಿ ಭಾಗವಹಿಸಿದರು. ಪಕ್ಷಪಾತದ ಆಪಾದನೆ ಬಂದಾಗ ಸ್ಪರ್ಧೆಯನ್ನು ಇತರ ಏಶಿಯಾ ದೇಶಗಳಲ್ಲಿ ನಡೆಸಲಾಯಿತು. ಆದರೆ ಅಂತಿಮ ಆಯ್ಕೆ ವ್ಯವಸ್ಥಾಪಕರದ್ದೆ.

ಮಿಸ್ ಯೂನಿವರ್ಸ್ : ಈ ಸ್ಪರ್ಧೆ ಪ್ರಾರಂಭವಾದದ್ದು 1950ರಲ್ಲಿ. ಸ್ನಾನದ ಉಡುಪು ತಯಾರಿಸುವ ಪೆಸಿಫಿಕ್ ನಿಟ್ಟಿಂಗ್ ಮಿಲ್‌ನವರು ಪ್ರಾರಂಭಿಸಿದರು. ಮಿಸ್ ಅಮೆರಿಕ ಸ್ಪರ್ಧೆಯ ವಿರೋಧವಾಗಿ ಇದನ್ನು ಪ್ರಾರಂಭಿಸಲಾಯಿತು. ಇವರ ಮಿಲ್‌ನ ಉಡುಪನ್ನು ಧರಿಸಿದ್ದ (ಸ್ಪರ್ಧೆಯಲ್ಲಿ) ಸುಂದರಿಯರ ಫೋಟೋಗಳನ್ನು ನೀಡದ ಕಾರಣ ಮಿಸ್ ಯೂನಿವರ್ಸ್ ಹುಟ್ಟಿತು. ಈ ಸ್ಪರ್ಧೆಗಳು ಬೇರೆ ಯಾವುದೇ ವಾಹನಗಳ ಜಾಹಿರಾತಿನಂತೆಯೆ ಎಂದು ತಿಳಿದಿದ್ದ ಈ ಕಂಪೆನಿಯವರು, ಮುಂದೆ ಕ್ಯಾಲಿಫೋರ್ನಿಯಾದ ಮುನಿಸಿಪಾಲಿಟಿಗೆ ಮಾರಿದರು. ಅಲ್ಲಿನ ಕೇಸರ್‌ಲೂಥ್ ಹಾಗು ಹೆಚ್. ಎಲ್. ಗ್ಲಾಂಬೆಲ್ ಅವರು ದೇಶದ ದೊಡ್ಡ ಕಂಪೆನಿಯಾದ ಪ್ರಾಕ್ಟರ್ ಅಂಡ್ ಗ್ರಾಂಬೆಲ್ ಅವರ ಸ್ಪಾನ್‌ಸರ್‌ಶಿಪ್ ಪಡೆದರು. ಸ್ಪರ್ಧೆಯನ್ನು ಪಶ್ಚಿಮ ತೀರಕ್ಕೆ ಬದಲಾಯಿಸಬೇಕೆಂಬ ಶರತ್ತು ಹಾಕಿ ಸ್ಪರ್ಧೆಯನ್ನು ಪ್ರಾಯೋಜಿಸಲು ಒಪ್ಪಿದರು. ಈ ರೀತಿ 1956ರಲ್ಲಿ ಸ್ಪರ್ಧೆಯು ಮಾಯಾಮಿ ಸಿಟಿಗೆ ಬಂದಿತು. ಪ್ರಾಕ್ಟರ್ ಅಂಡ್ ಗ್ಯಾಂಬಲ್‌ನವರೇ ಇಂದಿಗೂ ಮುಖ್ಯ ಪ್ರಾಯೋಜಕರು. ಪಾರಾಮೌಂಟ್‌ನವರು 1981ರಲ್ಲಿ ಸ್ಪರ್ಧೆಯನ್ನು ಕೊಂಡುಕೊಂಡರು.

ಮಿಸ್ ಯುನೈಟೆಡ್ ಟೀನ್ ಏಜರ್ - ಅಮೆರಿಕೆಯ ಹದಿ ಹರಯದ ಸುಂದರಿ :

1972ರಲ್ಲಿ ಚಾರ್ಲ್ಸ್ ಬಿಲ್ಲಿಂಗ್ಸ್ ಹಾಗೂ ಅವನ ಹೆಂಡತಿಯು ಈ ಸ್ಪರ್ಧೆಯನ್ನು ಆರಂಭಿಸಿದರು. ಈಗ ಬಿಲ್ಲಿಂಗ್ಸ್ ಹಾಗು ಬಾರ್ಬರಾ ಪ್ಯಾಟ್ರಿಕ್ ಜಂಟಿ ಮಾಲೀಕತ್ವದಲ್ಲಿ ಸ್ಪರ್ಧೆ ನಡೆಯುತ್ತವೆ. ಬಾರ್ಬರಾಳ ಜಾರ್ಜಿಯಾದಲ್ಲಿನ ಮನೆಯೇ ಕಛೇರಿ. ಸ್ಪರ್ಧೆಯ ಅರ್ಧದಷ್ಟು ಶೇರು ಬಾರ್ಬರಾಳ ಹೆಸರಿನಲ್ಲಿದೆ. ಪ್ರಾಯೋಜಕರ ಫೀಸಿನಿಂದ, ಟಿಕೇಟುಗಳಿಂದ ಹಾಗು ಸ್ಪರ್ಧೆಗೆ ಬರುವ ಜಾಹೀರಾತುಗಳಿಂದ ಹಣ ಕೊಳ್ಳೆ ಹೊಡೆಯುತ್ತಾರೆ.

ಮಿಸ್ ಇಂಡಿಯಾ : ಈ ಸ್ಪರ್ಧೆಯನ್ನು ಪ್ರಾರಂಭಿಸಿದವರು ಈವ್ಸ್‌ವೀಕ್ಲಿ ಹಾಗು ಫೆಮಿನಾ ಪತ್ರಿಕೆಯವರು. ಫೆಮಿನಾದ ಸಂಪಾದಕಿ ವಿಮಲಾ ಪಾಟೀಲ್, ಈವ್ಸ್ ವೀಕ್ಲಿಯ ಸಂಪಾದಕಿ ಗುಲ್‌ಶನ್ ಈವಿಂಗ್, ಈ ಸ್ಪರ್ಧೆಯ ಕರ್ತೃಗಳು. ಈವ್ಸ್ ವೀಕ್ಲಿಯ ಸಂಪಾದಕರೆ ಸ್ಟಾರ್ ಅಂಡ್ ಸ್ಟೈಲ್ ಎಂಬ ಗ್ಲಾಮರಸ್ ಸಿನಿಮಾ ಪತ್ರಿಕೆಯ ಸಂಪಾದಕರು. ಇವರುಗಳೇ ಸ್ಪರ್ಧೆಯ ಮುಖ್ಯ ವ್ಯವಸ್ಥಾಪಕರು. ತಮ್ಮನ್ನು ಸ್ತ್ರೀಸ್ವಾತಂತ್ರ್ಯದ ಸಂಕೇತಗಳೆಂದು ಕರೆದುಕೊಳ್ಳುವ ಇವರು, ಮಹಿಳೆಯರನ್ನು ಲೈಂಗಿಕ ವಸ್ತುಗಳೆಂದು ಪರಿಗಣಿಸುವುದನ್ನು ರಾಜಾರೋಷವಾಗಿ ಖಂಡಿಸುವ ಇವರ ಸ್ಪರ್ಧೆಗಳಲ್ಲಿ ಮಹಿಳೆಯರು ಲೈಂಗಿಕ ವಸ್ತುಗಳಲ್ಲವೆಂದು ನಂಬುತ್ತಾರೆ! ಒಂದಿಲ್ಲೊಂದು ನೆಪದಲ್ಲಿ ಈ ರೀತಿಯ ಸ್ಪರ್ಧೆಗಳು ಇಂಡಿಯಾದಲ್ಲಿ ನಡೆಯುತ್ತಾ ಬಂದಿವೆ. ಒಂದು ವರದಿಯ ಪ್ರಕಾರ 1976ರಲ್ಲಿ 137 ಸ್ಪರ್ಧೆಗಳು ನಡೆದಿವೆ. ಲಕ್ಷಾಂತರ ರೂಪಾಯಿಗಳ ಸಂಪಾದನೆ, ಧಿಡೀರ್ ಜನಪ್ರಿಯತೆ, ಶ್ರೀಮಂತ ಗಂಡಂದಿರು ಸಿಗವ ಅವಕಾಶ, ಸ್ಥೈರ್ಯ, ಶೋಭೆ, ಲಾವಣ್ಯ ಪಡೆಯುವ ಅವಕಾಶ - ಈ ಆಸೆಗಳನ್ನು, ಕನಸುಗಳನ್ನು ಹುಟ್ಟಿಸಿ, ಲಾಭ ಪಡೆಯುವ ಸಂಚಿದು. ಮಾಮೂಲಿ ಹೆಂಗಸಿನಿಂದ ಮಹಾರಾಣಿಯಾಗುವ ಕನಸು ಹೊತ್ತು ಸಾವಿರಾರು ಹುಡುಗಿಯರು ಸ್ಪರ್ಧೆಯಲ್ಲಿ ಪಾಲ್ಗೊಳ್ಳುತ್ತಾರೆ. ಗೆದ್ದರೆ ಹೊರದೇಶದ ಸ್ಪರ್ಧೆಗಳಲ್ಲಿ ಪಾಲ್ಗೊಳ್ಳಲು ಪ್ರಯಾಣದ ಖರ್ಚು, ನಗದು ಹಣ ಅಲ್ಲದೆ ರಾಶಿ ಉಡುಗೊರೆಗಳು, ಜೊತೆಗೆ ಪ್ರಾಯೋಜಿಸಿದ ಕಂಪನಿಗಳಿಗೆ ಒಂದು ವರ್ಷದ ಜೀತ.

ನಾಯಿಕೊಡೆಗಳಂತೆ ಸೌಂದರ್ಯ ಸ್ಪರ್ಧೆಗಳು ತಲೆ ಎತ್ತುತ್ತಿವೆ ಹಾಗು ಪಿನ್‌ನಿಂದ ಹಿಡಿದು ಮೋಟಾರ್ ಕಾರುಗಳ ಮಾರಾಟಕ್ಕೂ ಹೆಂಗಸರನ್ನು ಸರಕಾಗಿಸುತ್ತಿದ್ದಾರೆ. ಇಲ್ಲದ ಭ್ರಮೆಗಳನ್ನು ಹುಟ್ಟಿಸುತ್ತಿವೆ. ಸಣ್ಣ, ಸಣ್ಣ ಊರಿನಲ್ಲೂ ಈ

ಪೀಡೆ ಹಬ್ಬುತ್ತಿವೆ. ಕೊಲ್ಹಾಪುರದಂತ ಸಣ್ಣ ಊರಿನಲ್ಲಿ, ನಿಕ್ಕರ್ ತಯಾರಿಸುವ ಮಹಾರಾಷ್ಟ್ರ ಟ್ರೇಡಿಂಗ್ ಕಾರ್ಪೋರೇಶನ್ ಎಂಬ ಖಾಸಗಿ ಕಂಪೆನಿಯೂ ಸೌಂದರ್ಯ ಸ್ಪರ್ಧೆಯನ್ನು ಏರ್ಪಡಿಸಿತ್ತು. ಮಿಲ್ಲಿ ಎಂಬ ಮಹಿಳೆಯರ ನಿಕ್ಕರ್‌ನ ಹೆಸರಿನಲ್ಲಿ ಸ್ಪರ್ಧೆಯನ್ನು ನಡೆಸಲಾಗಿತ್ತು. ಸ್ಪರ್ಧೆಯ ಹೆಸರು 'ಮಿಲ್ಲಿ ಬ್ಯೂಟಿ ಕಾಂಪಿಟೇಶನ್'. ನಮ್ಮ ನಗರದಲ್ಲೆ ನಡೆಯುವ 'ಮಿಸ್ ಬೆಂಗಳೂರು' ಸ್ಪರ್ಧೆ (ಈ ಸ್ಪರ್ಧೆಗೆ ಖ್ಯಾತ ಪರಿಸರವಾದಿ ಸುರೇಶ್ ಹೆಬ್ಳಿಕರ್ ಹಾಗು ಖ್ಯಾತ ರಂಗಭೂಮಿ, ಸಿನಿಮಾ ನಟಿ ಆರುಂಧತಿಯವರು ಜಡ್ಜ್‌ಗಳಾಗಿದ್ದರು), ಇತ್ತೀಚೆಗೆ ದಾವಣಗೆರೆಯಲ್ಲಿ ನಡೆದ 'ಮಿಸ್ ಹೌಸ್ ವೈಫ್', ಅನೇಕ ಕಾಲೇಜುಗಳಲ್ಲಿ ನಡೆಯುವ ಫ್ಯಾಶನ್ ಶೋಗಳು ಇವೆಲ್ಲಾ ನಾಯಿಕೊಡೆಗಳು ಹೆಚ್ಚಾಗುತ್ತಿರುವುದರ ಸಾಕ್ಷಿ.

ಕ್ಯಾರಾಬಿಯನ್ ರಾಷ್ಟ್ರದಲ್ಲಿ ವಿಶೇಷವಾಗಿ ಸಿಗುವ 'ಅಂಬರ್' ಎಂಬ ಕಲ್ಲನ್ನು ಜನಪ್ರಿಯಗೊಳಿಸಲು ನಡೆದ 'ಮಿಸ್ ಅಂಬರ್ ಆಫ್ ದಿ ವರ್ಲ್ಡ್', ಹವಾಯಿ ದೇಶದ 25ನೇ ವಾರ್ಷಿಕೋತ್ಸವಕ್ಕೆ ನಡೆದ 'ಹವಾಯಿಯನ್ ಟ್ರಾಪಿಕಲ್ ಇಂಟರ್ ನ್ಯಾಶನಲ್' (ಇದರ ಮೂಲ ಉದ್ದೇಶ ಹೊಸ ಸನ್‌ಟ್ಯಾನ್ ಎಣ್ಣೆಯ ಪ್ರಚಾರವಾಗಿತ್ತು), ನ್ಯೂಯಾರ್ಕ್‌ನಲ್ಲಿ ನಡೆದ 'ಮಿಸ್ ಜೂಯಿಶ್ ಬ್ಯೂಟಿ ಕಾಂಟೆಸ್ಟ್ (ಯುಹೂದ್ಯ ಸುಂದರಿ), ಥೈಲ್ಯಾಂಡಿನ ಲೋಪ್‌ಮರಿಯಲ್ಲಿ ಪ್ರವಾಸೋದ್ಯಮವನ್ನು ಹೆಚ್ಚಿಸಲು ನಡೆದ ವಿಧವೆಯರ, ಬೊಕ್ಕ ತಲೆಯವರ ಸ್ಪರ್ಧೆ, ಅಮೆರಿಕದ 'ನ್ಯೂಡ್ ಗೆಲಾಕ್ಸಿ ಪೆಜೆಂಟ್' ಹಾಗು 'ಮಿಸ್ ಆಲ್‌ಬೇರ್', ಮಕ್ಕಳಿಗೆಂದು ರೆವಾನಿಸ್ ಎಂಬ ಸಂಸ್ಥೆ ನಡೆಸುವ (ಸ್ಪರ್ಧೆಗಳು ಮಕ್ಕಳನ್ನು ಬಿಟ್ಟಿಲ್ಲ!) 'ಲಿಟಲ್ ಮಿಸ್ ಪಿನೆಟ್' (ಮಿಸ್ ಪುಟಾಣಿ ಕಡ್ಲೆಕಾಯಿ ಬೀಜ!), 'ಲಿಟಲ್ ಮಿಸ್ ಪಿಂಕ್ ಟೊಮೊಟೊ' - ಹೀಗೆ ಪಟ್ಟಿ ಉದ್ದ ಬೆಳೆಯುತ್ತಿರುವುದನ್ನು ನೋಡಿದರೆ, ಇದು ಜಗತ್ತಿಗೆ ಹಬ್ಬುತ್ತಿರುವ ವ್ಯಾಪಾರಿಗಳ ಸಂಚು ಎಂಬುದು ಗೊತ್ತಾಗುತ್ತದೆ. ಲಾಭ ಗಳಿಕೆಯು ಇದರ ಮುಖ್ಯ ಉದ್ದೇಶ. ಮಕ್ಕಳಿಗೆಂದು ನಡೆವ ಸೌಂದರ್ಯ ಸ್ಪರ್ಧೆಯಲ್ಲಿ ಮಗು ದೊಡ್ಡದಾದಾಗ ಸ್ಕಾಲರ್‌ಶಿಪ್ ಕೊಡುವ ಆಸೆ ಹುಟ್ಟಿಸುತ್ತಾರೆ. 6 ವರ್ಷದ ಹುಡುಗಿ 12 ವರ್ಷಗಳ ನಂತರ ಸ್ಪರ್ಧೆ ನಡೆಸಿದವನನ್ನು ಹುಡುಕಿಕೊಂಡು ಹೋದರೆ!

●

## ಭ್ರಮೆಯಲ್ಲಿ ಬದುಕಬೇಡ ಬಾಲೆ

ಬದುಕ ಬೇಡ ಬಾಲೆ
ಭ್ರಮೆಯಲ್ಲಿ ನೀನು ಬದುಕಬೇಡ ಬಾಲೆ
ಬಣ್ಣದ ಕನಸಲಿ ಕಳೆದು ಹೋಗಬೇಡ
ಬೆಡಗಿನ ಬದುಕು ನಿನದಲ್ಲ ನೋಡ
ವಿಶ್ವ ಸುಂದರಿ ಸ್ಪರ್ಧೆಗೆ ನೀ ಹೋಗಲಾರೆ
ಆದರ ಒಳ-ಹೊರಗುಗಳ ನೀ ತಿಳಿಯಲಾರೆ ||೧||

ಹೊಟ್ಟೆಗಿಲ್ಲ ನಿನಗೆ ಎರಡು ಹೊತ್ತು
ಅಲ್ಲಿ ಬೇಕು ಹೈ ಹೀಲ್ಸು, ಬಿಕನಿ, ಲಿಪ್‌ಸ್ಟಿಕ್ಕು ||೨||

ನಿನ್ನ ಮನದ ಆಳ ನೀನು ತಿಳಿ
ಓದು ತಿಳಿ, ಮುಂದುವರಿ
ಭ್ರಮೆಯಲ್ಲಿ ನೀನು ಬದುಕಬೇಡ ಬಾಲೆ ||೩||

ಸೌಂದರ್ಯವೊಂದು ಬಿಕರಿ ಮಾಲು
ಕುತಂತ್ರ-ದುಷ್ಟಕೂಟ ಹಣದ ಆಟ
ಭ್ರಮೆಯಲ್ಲಿ ನೀನು ಬದುಕಬೇಡ ಬಾಲೆ ||೩||

ಬಿಕರಿಗಿಟ್ಟ ಮಾಲಾಗದಿರು
ನಿನ್ನರಿವೇ ನಿನಗೆ ಗುರು
ಭ್ರಮೆಯಲ್ಲಿ ನೀನು
ಬದುಕಬೇಡ ಬಾಲೆ ||೪||

**ಮಾಲತಿ ಎಸ್.**

*('ಮಹಿಳಾ ಒಕ್ಕೂಟ'ದಿಂದ ಆಡಿದ 'ಭ್ರಮೆಯಲ್ಲಿ ಬದುಕಬೇಡ ಬಾಲೆ' - ನಾಟಕಕ್ಕಾಗಿ ಬರೆದ ಹಾಡಿನ ತುಣುಕು).*

# ಸೌಂದರ್ಯ ಸ್ಪರ್ಧೆ ಪ್ರತಿಭಟನೆ ಒಂದು ಐತಿಹಾಸಿಕ ನೋಟ

ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸುವ ವಿಚಾರ ಪ್ರಸ್ತಾಪವಾದಾಗಲೆಲ್ಲಾ, ಜನ ಸಾಮಾನ್ಯರು, ಸೌಂಧರ್ಯ ಸ್ಪರ್ಧೆಯ ಪರವಾಗಿ ವಾದಿಸುವವರು, ಏನಿದು ಮಹಿಳೆಯರು ಈಗ ಇದ್ದಕ್ಕಿದ್ದಂತೆ ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸುತ್ತಿದ್ದಾರೆ, ಬೇರೆ ಬೇರೆ ಸ್ಥಳಗಳಲ್ಲಿ ಸೌಂದರ್ಯ ಸ್ಪರ್ಧೆ ನಡೆದಾಗ ಏಕೆ ಈ ಮಹಿಳೆಯರು ಮೌನವಾಗಿದ್ದರು ಎಂಬ ಪ್ರಶ್ನೆ ಕೇಳುವುದು ಸಹಜ. ಸೌಂದರ್ಯ ಸ್ಪರ್ಧೆಗಳು ನಡೆಯುವುದಕ್ಕೆ ಒಂದು ಇತಿಹಾಸವಿರುವಂತೆ, ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸುವುದಕ್ಕೂ ಒಂದು ಇತಿಹಾಸವಿರುವುದು ಬಹುಪಾಲು ಜನರ ಗಮನಕ್ಕೆ ಬಂದಿರುವುದಿಲ್ಲ. ಹಾಗಾಗಿ ಇದು ಬೆಂಗಳೂರಿನಲ್ಲಿ ನಡೆಯುತ್ತಿರುವ ಸೌಂದರ್ಯ ಸ್ಪರ್ಧೆಯ ವಿರುದ್ಧ ನಡೆಯುತ್ತಿರುವ ಪ್ರತಿಭಟನೆ "ಇದ್ದಕ್ಕಿದ್ದಂತೆ" ನಡೆಯುತ್ತಿರುವ ಘಟನೆಯೆಂಬಂತೆ ಕಾಣುತ್ತಿದೆ.

ಸೌಂದರ್ಯ ಸ್ಪರ್ಧೆಯನ್ನು ಪ್ರತಿಭಟಿಸುತ್ತಾ ಬಂದಿರುವುದಕ್ಕೆ ಒಂದು ಜಾಗತಿಕ ಇತಿಹಾಸವೇ ಇದೆ. ಮಹಿಳೆಯರನ್ನು ವ್ಯಾಪಾರದ ಸರಕನ್ನಾಗಿಸುವುದರ ವಿರುದ್ಧ, ಮಹಿಳೆಯರ ಪ್ರತಿರೋಧ ಚಳುವಳಿಯಷ್ಟೇ ಹಳೆಯದು.

ಜರ್ಮನಿಯಲ್ಲಿ ಸೌಂದರ್ಯ ಸ್ಪರ್ಧೆ ನಡೆದಾಗ, ಈ ಸ್ಪರ್ಧೆಯಲ್ಲಿ ಜಯ ಗಳಿಸಿದ ಮಹಿಳೆ, ಅಲ್ಲಿನ ನಿರ್ಣಾಯಕರ ಮುಂದೆ, ಯಾವುದೇ ಕೃತಕ ಅಲಂಕಾರವನ್ನು ಮಾಡಿಕೊಳ್ಳದೇ, ಸಹಜವಾಗಿ ತನ್ನನ್ನು ಪ್ರದರ್ಶಿಸಿಕೊಂಡಳು. ಸುಮಾರು 70ರ ದಶಕದಲ್ಲಿ ಲಂಡನ್ನಿನಲ್ಲಿ ಸೌಂದರ್ಯ ಸ್ಪರ್ಧೆಯು ನಡೆಯುವಾಗ ಹೂವಿನ ಬುಟ್ಟಿಗಳನ್ನು, ಇಂಕು ಉಗುಳುವ ಬಾಂಬುಗಳನ್ನು ಭಾಗವಹಿಸಿದವರ ಕಡೆ ಎಸೆದಿದ್ದರು. 60ರ ದಶಕದಲ್ಲಿ ಅಮೇರಿಕಾದಲ್ಲಿ ಸೌಂದರ್ಯ ಸ್ಪರ್ಧೆಯು ನಡೆಯುತ್ತಿದ್ದಾಗ, ಕಂಡು ಬಂದ ಪ್ರತಿಭಟನೆಯನ್ನು



ಬಹುದೊಡ್ಡ ಪ್ರತಿಭಟನೆಯೆನ್ನಬಹುದು. 1968ರಲ್ಲಿ ಮಹಿಳಾ ಚಳುವಳಿಗಾರರು ಕಾರ್ಮಿಕ ಸಂಘಟನೆಗಳು, "ಮಿಸ್ ಅಮೇರಿಕಾ" ಸ್ಪರ್ಧೆಯನ್ನು ಯಶಸ್ವಿಯಾಗಿ ಅಡ್ಡಿಪಡಿಸಿದರು. "ಮಹಿಳೆಯರು ಅವರ ಸ್ವಾತಂತ್ರ್ಯಕ್ಕಾಗಿ, ಕಪ್ಪು ಜನರು ಅವರ ಮೂಲಭೂತ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವಾಗ ಮಿಸ್ ಅಮೇರಿಕಾ ರೆವಲಾನ್ ಕಂಪನಿಗೆ ಹಣ ಮಾಡಲು ನೆರವಾಗುತ್ತಿದ್ದಾಳೆ, ರೆವಲಾನ್ ಕಂಪನಿ ಮದ್ದುಗುಂಡುಗಳನ್ನು ತಯಾರಿಸುತ್ತಿದೆಯೆಂಬ ಜನಪ್ರಿಯ ಘೋಷಣೆಯನ್ನು ಹುಟ್ಟು ಹಾಕಿದರು. ಸೌಂದರ್ಯ ಸ್ಪರ್ಧೆಗಳು ಹೇಗೆ ಸ್ತ್ರೀಯರನ್ನು ಒಂದು ಭೋಗದ ವಸ್ತುವನ್ನಾಗಿಸುತ್ತಿವೆಯೆಂದು ಚಿತ್ರಿಸುವ ವಿವಿಧ ರೀತಿಯ ಭಿತ್ತಿ ಚಿತ್ರಗಳನ್ನು ಪ್ರದರ್ಶಿಸಿದರು. ಈ ಧೋರಣೆಯನ್ನು ಪ್ರತಿಭಟಿಸುವುದರ ಜೊತೆಗೆ ಮಹಿಳೆಯರ ಉಡುಗೆ ತೊಡುಗೆ, ಸೌಂದರ್ಯ ಪರಿಕರಗಳನ್ನು ಸೃಷ್ಟಿಸುವ ಕೈಗಾರಿಕೆಗಳ ವಿರುದ್ಧ ಸಹ ದನಿ ಎತ್ತಿದರು.

1980ರಲ್ಲಿ ಕ್ಯಾಲಿಫೋರ್ನಿಯಾದಲ್ಲಿ "ಮಿಸ್ ಕ್ಯಾಲಿಫೋರ್ನಿಯಾ" ವಿರುದ್ಧ 'ಮಿತ್ ಕ್ಯಾಲಿಫೋರ್ನಿಯಾ' ಪ್ರತಿ ಸ್ಪರ್ಧೆಯನ್ನು ಏರ್ಪಡಿಸುವುದರ ಮೂಲಕ ತಮ್ಮ ಪ್ರತಿಭಟನೆಯನ್ನು ತೋರಿದರು. ಸೌಂದರ್ಯ ಸ್ಪರ್ಧೆಯನ್ನು ಪ್ರಶ್ನಿಸುವ ಬೀದಿ ನಾಟಕಗಳನ್ನು ಇವರು ಮಾಡಿದರು. ಕೇವಲ ನಾಲ್ಕು ಜನ ಮಹಿಳೆಯರಿಂದ ಪ್ರಾರಂಭವಾದ ಈ ಪ್ರತಿಭಟನೆ 1984ರಲ್ಲಿ 1,000 ಜನ ಮಹಿಳೆಯರು ಈ ಪ್ರತಿಭಟನೆಯಲ್ಲಿ ತಮ್ಮ ದನಿ ಸೇರಿಸಿದರು.

1984ರಲ್ಲಿ ಮೂರು ದಿನ ನಡೆದ ಸೌಂದರ್ಯ ಸ್ಪರ್ಧೆಯ ವಿರುದ್ಧ ಸ್ತ್ರೀಯರು "ಸ್ತ್ರೀಯರ ಪರವಾಗಿ ಆರೋಗ್ಯಕರ ನಿಲುವು" ವಿಷಯದೊಂದಿಗೆ ಪ್ರತಿಭಟನೆಯನ್ನು ತೋರಿದರು. ಸ್ತ್ರೀಯರ ಸ್ವಂತಿಕೆಯನ್ನು, ಅವರ ವ್ಯಕ್ತಿತ್ವವನ್ನು ಎತ್ತಿ ಹಿಡಿಯುವ ಸ್ಲೋಗನ್‌ಗಳನ್ನು, ಬ್ಯಾನರ್‌ಗಳನ್ನು ರೂಪಿಸಲಾಯಿತು. ಸಿಮನ್‌ಟೆನ್ ಎಂಬ ಜನಪ್ರಿಯ ರೂಪದರ್ಶಿಯು ಸಹ ಈ ಪ್ರತಿಭಟನೆಯೊಂದಿಗೆ ತನ್ನ ದನಿಯನ್ನು ಸೇರಿಸಿದ್ದರಿಂದ ಅವಳನ್ನು 24 ಬಾರಿ ಬಂಧಿಸಲಾಯಿತು.

1968ರಲ್ಲಿ ಅಟ್ಲಾಂಟಿಕ ಪಟ್ಟಣದಲ್ಲಿ ಸೆಪ್ಟೆಂಬರ್ 7ರಂದು ನಡೆದ ಸೌಂದರ್ಯ ಸ್ಪರ್ಧೆಯ ವಿರೋಧಿ ಪ್ರತಿಭಟನೆಯನ್ನು ಗಮನ ಸೆಳೆದ ಪ್ರತಿಭಟನೆಯೆಂದು ಗುರುತಿಸಬಹುದು. ಈ ಸ್ಪರ್ಧೆಯ ವಿರುದ್ಧ ಬಹುದೊಡ್ಡ ಪ್ರತಿಭಟನಾ ಮೆರವಣಿಗೆಯನ್ನು ಮಹಿಳಾ ಚಳುವಳಿಗಾರರು ಸಂಘಟಿಸಿದ್ದರು. ಕೃತಕ ಸೌಂದರ್ಯವರ್ಧಕ ಪರಿಕರಗಳನ್ನು ಈ ಪ್ರದರ್ಶನದ ಎಡೆಯಲ್ಲಿ ಎಸೆಯಲಾಯಿತಲ್ಲದೆ, ಸೌಂದರ್ಯವರ್ಧಕ ಸಾಧನಗಳನ್ನು ಹಾಗೂ ವಿಭಿನ್ನ ಮಾದರಿಯ ಫ್ಯಾಶನ್ ಉಡುಗೆ ತೊಡುಗೆಗಳನ್ನು ಬಹಿಷ್ಕರಿಸಲಾಯಿತು. "ಮಿಸ್ ಅಮೇರಿಕಾ" ಬೆದರು ಗೊಂಬೆಯನ್ನು ಮಾಡಿ ಹರಾಜು ಹಾಕುವ ಕಾರ್ಯಕ್ರಮವನ್ನೇ ಹಮ್ಮಿಕೊಳ್ಳಲಾಯಿತು. ಗೌರವಾನ್ವಿತ ಪುರುಷರೇ, 1969ರ ಸೌಂದರ್ಯ ಸ್ಪರ್ಧೆ ಮಾದರಿ ಇದು, ಹಿಂದಿನ ವರ್ಷಕ್ಕಿಂತ ಇದು ಚೆನ್ನಾಗಿದೆ. ನಡೆಯುತ್ತದೆ, ಮಾತನಾಡುತ್ತದೆ, ಕೀ ಕೊಟ್ಟರೆ ನಗುತ್ತದೆ, ಅದೂ ಅಲ್ಲದೇ ಇದು ಮನೆಗೆಲಸ ಮಾಡುತ್ತದೆ ಎಂಬ ಘೋಷಣೆ ಹೆಚ್ಚು ಜನಪ್ರಿಯವಾಗಿತ್ತು.

ಅಮೇರಿಕಾದಲ್ಲಿ ನ್ಯಾಷನಲ್ ಆರ್ಗನೈಜೇಶನ್ ಆಫ್ ವುಮೆನ್ (NOW) ಒಂದು ಶಕ್ತಿಯುತ ಪ್ರತಿಭಟನೆಯನ್ನು ಏರ್ಪಡಿಸಿತ್ತು. ಸೌಂದರ್ಯ ಸ್ಪರ್ಧೆಯನ್ನು ಪ್ರತಿಭಟಿಸಲು ಇದು ಪ್ರತಿಸ್ಪರ್ಧಿಯಾಗಿ "ಅದ್ಭುತ ಮಹಿಳಾ ಸ್ಪರ್ಧೆ"ಯನ್ನು ಏರ್ಪಡಿಸಿತು. ಸೌಂದರ್ಯ ಸ್ಪರ್ಧೆಯಲ್ಲಿ ಸ್ಪರ್ಧಿಸಿದ 50 ಜನ ಸ್ಪರ್ಧಿಗಳನ್ನು ಸಹ ಈ ಸ್ಪರ್ಧೆಗೆ ಆಹ್ವಾನಿಸಲಾಯಿತು. ಪ್ರತಿಭಟನಾ ಹಾಡುಗಳನ್ನು ಸಹ ಹಾಡಿ ಜನಪ್ರಿಯ ಗೊಳಿಸಲಾಯಿತು. ಈ ಪ್ರತಿಭಟನೆಗೆ ವಿವಿಧ ಆಯಾಮವನ್ನು ನೀಡದ ತಾತ್ವಿಕ ಪ್ರಯತ್ನವನ್ನು ಮೊಟ್ಟ ಮೊದಲನೆಯದಾಗಿ ಮಾಡಲಾಯಿತೆಂಬುದು ಸಹ ಒಂದು ಚಾರಿತ್ರಿಕ ಮೈಲಿಗಲ್ಲು.

ಮಹಿಳೆಯರು ಅವರ ಮೇಲೆ ಹೇರಲಾದ ಪಾತ್ರವನ್ನು ನಿರ್ವಹಿಸುತ್ತಿದ್ದಾರೆ. ದೈನಂದಿನ ಜೀವನದಲ್ಲಿ ಮಹಿಳೆಯರು ಪುರುಷರ ಸಮ್ಮತಿಗಾಗಿ ಸ್ಪರ್ಧಿಸುವಂತಾಗಿದೆ. ವರ್ಣ ದ್ವೇಷದ ವಿರುದ್ಧ, ಅಮೇರಿಕಾದ ಯುದ್ಧ ದಾಹ, ಗ್ರಾಹಕ ಸಂಸ್ಕೃತಿ, ಅನಾರೋಗ್ಯಕರ ಸ್ಪರ್ಧಾ ಮನೋಭಾವನೆ, ಮಹಿಳೆಯರ ದೈಹಿಕ ಸೌಂದರ್ಯದ ವಿಕೃತ ಕಲ್ಪನೆ, ಸ್ತ್ರೀಯರು ಲೈಂಗಿಕವಾಗಿ ಆಕರ್ಷಕರಾಗಿರಬೇಕೆನ್ನುವ, ಸ್ತ್ರೀಯರು ಬೌದ್ಧಿಕವಾಗಿ ಹುಂಬರಾಗಿರಬೇಕೆನ್ನುವ, ಸ್ತ್ರೀಯರಿಗೆ ರಾಜಕೀಯ ನಿಲುವು ಬೇಕಿಲ್ಲವೆನ್ನುವ, ಸೌಂದರ್ಯವನ್ನು ಒಂದು ಶಕ್ತಿಯಾಗಿ ಉಪಯೋಗಿಸಿ[illegible] [illegible]ಳುವ [illegible]ದ ಮೇಲೆ ಬೀರುವ ಪರಿಣಾಮ [illegible] [illegible] ಅಂಶಗಳನ್ನೊಳಗೊಂಡ ಪ್ರತಿಭಟನೆಯನ್ನು ಜನಪ್ರಿಯಗೊಳಿಸಲಾಯಿತು.

ಭಾರತದಲ್ಲಿಯೂ ಸಹ ಮಹಿಳಾ ಸಂಘಟನೆಗಳು ಸೌಂದರ್ಯ ಸ್ಪರ್ಧೆಯ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾ ಬಂದಿದೆ. ಸೌಂದರ್ಯ ಸ್ಪರ್ಧೆಯ ಹಿಂದಿರುವ ಶೋಷಿತ ಅಂಶಗಳತ್ತ ಈ ಸಂಘಟನೆಗಳು ಸಾರ್ವಜನಿಕರ ಗಮನವನ್ನು ಸೆಳೆಯಲು ಪ್ರಯತ್ನಿಸಿವೆ. 70ರ ದಶಕದಲ್ಲಿ ವ್ಯವಸ್ಥಿತವಾದ ಪ್ರತಿಭಟನಾ ಪ್ರದರ್ಶನಗಳನ್ನು ಕಾಣಬಹುದು. 1971ರಲ್ಲಿ ದೆಹಲಿಯ ಮಿರಾಂಡ ಹೌಸ್‌ನ ವಿದ್ಯಾರ್ಥಿಗಳು ಇಂತಹ ಸ್ಪರ್ಧೆಗಳನ್ನು ಬಹಿಷ್ಕರಿಸಬೇಕೆಂಬ ಬೇಡಿಕೆಯನ್ನು ಇಟ್ಟು ಪ್ರತಿಭಟನೆಯನ್ನು ನಡೆಸಿದರು. ಈ ಪ್ರದರ್ಶನದ ಫಲವಾಗಿ

ಸ್ಪರ್ಧೆಯನ್ನು ಹಿಂತೆಗೆದುಕೊಳ್ಳಲಾಯಿತು. 1978ರಲ್ಲಿ ಸ್ತ್ರೀ ವಿಮೋಚನಾ ಚಳುವಳಿಯಲ್ಲಿ ತೊಡಗಿದ್ದ ವಿದ್ಯಾರ್ಥಿನಿಯರು ಮಿಸ್ ಇಂದ್ರಪ್ರಸ್ತ ಸ್ಪರ್ಧೆಯನ್ನು ಯಶಸ್ವಿಯಾಗಿ ನಿಲ್ಲಿಸಿದರು. ಅದೇ ವರ್ಷ ಸೈಂಟ್ ಸ್ಟೀಫನ್ ಕಾಲೇಜಿನಲ್ಲಿ ನಡೆಸಬೇಕೆಂದಿದ್ದ ಸ್ಪರ್ಧೆಯನ್ನು ಹಿಂತೆಗೆದುಕೊಳ್ಳಲಾಯಿತು. 1979ರಲ್ಲಿ ದೆಹಲಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿಯರೂ ಸಹ ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸಿ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ವಿವಿಧ ಕಾಲೇಜುಗಳ ವಿದ್ಯಾರ್ಥಿ ಯೂನಿಯನ್‌ಗಳನ್ನು ಸಂಘಟಿಸಿ ಪ್ರತಿಭಟನೆಯನ್ನು ಹಮ್ಮಿಕೊಳ್ಳಲಾಯಿತು. ಪ್ರಗತಿಪರ ವಿದ್ಯಾರ್ಥಿಗಳಿಂದ ದೊರೆತ ಪ್ರೋತ್ಸಾಹ ಹಾಗೂ ಬೆಂಬಲದಿಂದ ಸೌಂದರ್ಯ ಸ್ಪರ್ಧೆಯ ಬದಲಾಗಿ ಪುರುಷರಿಗೆ ಹಾಗೂ ಸ್ತ್ರೀಯರಿಗೆ "ವ್ಯಕ್ತಿತ್ವ" ಸ್ಪರ್ಧೆಯನ್ನು ಏರ್ಪಡಿಸಲಾಯಿತು. 1979 ಮಾರ್ಚ್ 23ರಂದು ಸುಮಾರು 100 ಜನ ಮಹಿಳೆಯರು ಹಾಗೂ ಪುರುಷರು ಸೌಂದರ್ಯ ಸ್ಪರ್ಧೆ ನಡೆಯಲಿರುವ ಸ್ಟೇಡಿಯಂನ ಮುಂದೆ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಮುಖ್ಯ ಅತಿಥಿಯಾದ ದೇವಾನಂದ್ ಸ್ಟೇಡಿಯಂಗೆ ಹಿಂಬಾಗಿಲಿನಿಂದ ಹೋಗುವಾಗ ಸೌಂದರ್ಯ ಸ್ಪರ್ಧೆಯ ವಿರುದ್ಧ ಘೋಷಣೆಯನ್ನೂ ಕೂಗುತ್ತಿದ್ದರು. ಸ್ಟೇಡಿಯಂಗೊಳಗಿದ್ದ ಸುಮಾರು 4,000 ಜನ ಪ್ರತಿನಿಧಿಗಳು (ಬಹುಪಾಲು ಪುರುಷರು) ಸಂಗೀತವನ್ನು ಕೇಳುತ್ತಾ, ಸೌಂದರ್ಯ ಸ್ಪರ್ಧೆಯನ್ನು ಆಹ್ಲಾದಿಸುತ್ತಿದ್ದರು. ಜನಪ್ರಿಯ ನಟ ದೇವಾನಂದ್ ಸ್ಟೇಜಿಗೆ ಎದ್ದು ಬರುತ್ತಿದ್ದ ಹಾಗೆ ಗಲಾಟೆಯಾದುದರಿಂದ ದೇವಾನಂದ್ ಪೋಲಿಸರ ರಕ್ಷಣೆಯಲ್ಲಿ ತೆರಳಬೇಕಾಯಿತು. ಇದು ಪ್ರತಿಭಟನೆ ಮಾಡುತ್ತಿದ್ದ ವಿದ್ಯಾರ್ಥಿಗಳಿಗೆ ಸುಂದ ಜಯವಾಗಿತ್ತು.

ಆದರೆ ಈ ರೀತಿಯ ಸೌಂದರ್ಯ ಸ್ಪರ್ಧೆಯು ಉನ್ನತ, ಆದರ್ಶದ ಕಡೆ ಹೊರಳಿದ ಅಪರೂಪದ ನಿದರ್ಶನವನ್ನು ನಮ್ಮ ದೇಶದಲ್ಲಿ ನೋಡಬಹುದು. 1977ರಲ್ಲಿ ಮಿಸ್ ಇಂಡಿಯಾ ತಾನು ತೆಗೆದುಕೊಂಡ ದ. ಆಫ್ರಿಕಾದ ಪರವಾದ ನಿಲುವಿನಿಂದಾಗಿ ಅಂತರ ರಾಷ್ಟ್ರೀಯ ಸೌಂದರ್ಯ ಸ್ಪರ್ಧೆಯಲ್ಲಿ ಭಾಗವಹಿಸಲು ನಿರಾಕರಿಸಿದಳು. 1976ರಲ್ಲಿ ಥೈಲೆಂಡಿನ ವಿದ್ಯಾರ್ಥಿಗಳು ಸ್ಥಳೀಯ ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸಿ ದೊಂಬಿ ನಡೆಸಿದರು. ಸೌಂದರ್ಯ ಸ್ಪರ್ಧೆಗಳು ಥೈಲೆಂಡಿನ ಸ್ಥಳೀಯ ಸಂಸ್ಕೃತಿಯನ್ನು ನಾಶಪಡಿಸುತ್ತದೆಯೆಂಬುದು ವಿದ್ಯಾರ್ಥಿಗಳ ದೃಢವಾದ ನಂಬಿಕೆಯಾಗಿತ್ತು.

1982ರಲ್ಲಿ ಜನವಾದಿ ಮಹಿಳಾ ಸಮಿತಿಯು ಮಿಸ್ ಇಂಡಿಯಾ ವಿರುದ್ಧ ಬಹುದೊಡ್ಡ ಪ್ರತಿಭಟನೆಯನ್ನು ಏರ್ಪಡಿಸಿತ್ತು.

ಈ ಪ್ರತಿಭಟನೆಗಳು ಸಾಮಾನ್ಯವಾಗಿ ಸೌಂದರ್ಯ ಸ್ಪರ್ಧೆಯ ವಿರುದ್ಧ ಎನ್ನುವುದಕ್ಕಿಂತ "ಅದು ನಡೆಯುವ ವಿಧಾನ ವಿರುದ್ಧ ಹಾಗೂ ಅವುಗಳ ಹಿಂದಿರುವ ಉದ್ದೇಶಗಳ ವಿರುದ್ಧವಾಗಿತ್ತು. ಸ್ತ್ರೀಯರನ್ನು ಒಂದು ಭೋಗದ ವಸ್ತುವನ್ನಾಗಿಸಿ ಉಪಯೋಗಿಸಿಕೊಳ್ಳುವುದರ ವಿರುದ್ಧದ ಕೂಗಾಗಿತ್ತು. ಸ್ತ್ರೀ ದೇಹವನ್ನು ವ್ಯಾಪಾರೀಕರಣಗೊಳಿಸಿ, ಬೆಳೆಯುತ್ತಿರುವ ಉಡುಪು, ಸೌಂದರ್ಯ ಸಾಧನ ಕೈಗಾರಿಕೆಗಳ ವಿರುದ್ಧ ಜನರ ಪ್ರತಿಭಟನೆಯಾಗಿತ್ತು.

ಬೆಂಗಳೂರಿನಲ್ಲಿ ನಡೆಯುತ್ತಿರುವ ವಿಶ್ವಸುಂದರಿ ಸ್ಪರ್ಧೆಯನ್ನು ವಿರೋಧಿಸಿ ಹಲವಾರು ಮಹಿಳಾ ಸಂಘಟನೆಗಳು ಹಾಗೂ ಪ್ರಗತಿಪರ ಸಂಘಟನೆಗಳು ವೈಯಕ್ತಿಕ ನೆಲೆಯಲ್ಲಿ ಹಾಗೂ ಒಂದು ವೇದಿಕೆಯಲ್ಲಿ ಸಂಘಟಿತ ಪ್ರತಿಭಟನೆಯನ್ನು ತೋರುತ್ತಿವೆ. 'ಮಾನಸ' ಪ್ರತಿವಾರ ನಡೆಸುವ ಸಭೆಯಲ್ಲಿ ಸೌಂದರ್ಯ ಸ್ಪರ್ಧೆಯನ್ನು ಮಹಿಳಾ ಸಂಘಟನೆಗಳೂ ಹಾಗೂ ಎಲ್ಲಾ ಪ್ರಗತಿಪರ ಸಂಘಟನೆಗಳು ಒಂದುಗೂಡಿ ಪ್ರತಿಭಟಿಸಬೇಕೆಂಬುದನ್ನು, ಅದರ ಅಗತ್ಯವನ್ನು ಮನಗಂಡು ಬೆಂಗಳೂರಿನ ಎಲ್ಲಾ ಮಹಿಳಾ ಸಂಘ-ಸಂಸ್ಥೆಯನ್ನು ಸಂಪರ್ಕಿಸಿ, ಒಂದು ಸಭೆಯನ್ನು ಕರೆಯಿತು. ಈ ಸಭೆಗೆ ವಿವಿಧ ಸಂಘ-ಸಂಸ್ಥೆಯ ಪ್ರತಿನಿಧಿಗಳು ಭಾಗವಹಿಸಿ, ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸಲು ಸಾಧ್ಯತೆಯಿರುವ ವಿವಿಧ ಕಾರ್ಯಕ್ರಮಗಳನ್ನು ಕುರಿತು ಚರ್ಚಿಸಲಾಯಿತು. ಮಾನಸ, ವಿಮೋಚನಾ ಚಿಂತನ ಬಳಗ, ಮಾನಿನಿ, ಜನೋದಯ, ವಿಮೆನ್ಸ್‌ವಾಯ್ಸ್, ವಿಸ್ತಾರ್, ಮಹಿಳಾ ಪ್ರಗತಿ, ಐಪ್ವಾ, ಜಾಯಿಂಟ್ ವಿಮೆನ್ಸ್ ಪ್ರೋಗ್ರಾಂನ ಪ್ರತಿನಿಧಿಗಳು ಈ ಸಭೆಗಳಲ್ಲಿ ಭಾಗವಹಿಸುತ್ತಾ ಬಂದರು. ಈ ಸಭೆಯಲ್ಲಿ ಎಲ್ಲಾ ಮಹಿಳಾ ಸಂಸ್ಥೆಗಳನ್ನೊಳಗೊಂಡ ಮಹಿಳಾ ಸಂಘರ್ಷ ಒಕ್ಕೂಟದ ಮೂಲಕ ಸೌಂದರ್ಯ ಸ್ಪರ್ಧೆಯನ್ನು ಪ್ರತಿಭಟಿಸಲು ಸೆಪ್ಟೆಂಬರ್ 30ರಂದು ರ್‍ಯಾಲಿಯನ್ನು ನಡೆಸುವ ಹಾಗೂ ಕರಪತ್ರವನ್ನು ಹೊರತರುವ ನಿರ್ಧಾರವನ್ನೂ ಮಾಡಲಾಯಿತು. ಕರಪತ್ರಕ್ಕೆ ತಗುಲುವ ವೆಚ್ಚವನ್ನು ಹಾಗು ರ್‍ಯಾಲಿಯ ಇತರೇ ವೆಚ್ಚವನ್ನು ಪ್ರತಿಯೊಂದು ಸಂಘಟನೆಗಳಿಂದ ಸಮನಾಗಿ ಹಂಚಿಕೊಳ್ಳಲಾಯಿತು. ಕರಪತ್ರದಲ್ಲಿರಬೇಕಾದ ಸೌಂದರ್ಯ ಸ್ಪರ್ಧೆಯ ಬಗೆಗಿನ ನಿಲುವನ್ನೂ ಚರ್ಚೆಯ ಮೂಲಕ ಸ್ಪಷ್ಟಪಡಿಸಿಕೊಳ್ಳುವುದರ ಜೊತೆಗೆ, ಕೋಮುವಾದಿ ಶಕ್ತಿಗಳು ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸುತ್ತಿರುವ ಹಿಂದಿರುವ ಧೋರಣೆಯನ್ನು ಸಹ ವಿರೋಧಿಸಬೇಕೆಂದು ಒಮ್ಮತದಿಂದ ನಿರ್ಧರಿಸಲಾಯಿತು. ರ್‍ಯಾಲಿಗೆಂದೆ ಹೊರಡಿಸಿದ ಕರಪತ್ರವನ್ನು ಮುದ್ರಿಸಲಾಗಿದೆ.

ಸೌಂದರ್ಯ ಸ್ಪರ್ಧೆಯನ್ನು ಕೇವಲ ಮಹಿಳಾ ಸಂಘರ್ಷ ಒಕ್ಕೂಟದವರು ಮಾತ್ರವಲ್ಲದೆ, ಈಗಾಗಲೇ ಪ್ರತಿಭಟನೆ ಪ್ರಾರಂಭಿಸಿದ್ದ ಪ್ರಗತಿಪರ ಸಂಘಟನೆಗಳು, ಹಾಗೂ ಎಡಪಂಥೀಯ ಪಕ್ಷಗಳು ಎಲ್ಲ ಸೇರಿ ಒಂದು ವೇದಿಕೆಯಡಿಯಲ್ಲಿ ಪ್ರತಿಭಟಿಸಬೇಕೆಂಬ ಅಭಿಪ್ರಾಯವನ್ನು ಹಲವಾರು

ಪ್ರಗತಿಪರ ಸಂಘಟನೆಗಳು ಭಾವಿಸಿದ್ದರಿಂದ, ಒಕ್ಕೂಟ, ವಿವಿಧ ಸಂಘಟನೆಗಳನ್ನು ಸಂಪರ್ಕಿಸಬೇಕೆಂದು ಸಹ ಅಭಿಮತಪಟ್ಟಿತು. ಇದರ ಫಲವಾಗಿ ಮಹಿಳಾ ಸಂಘರ್ಷ ಒಕ್ಕೂಟದವರು ಹಮ್ಮಿಕೊಂಡ ರ್‍ಯಾಲಿಗೆ ಬೆಂಬಲ ಕೋರುವುದರ ಫಲವಾಗಿ, (ಕೋಮು ಸಂಘಟನೆಗಳ ಹೊರತಾಗಿ) ಇತರ ಎಲ್ಲಾ ಪ್ರಗತಿಪರ ವೇದಿಕೆಗಳನ್ನು ಸಂಪರ್ಕಿಸಿ, ಒಂದು ವೇದಿಕೆಯಡಿಯಲ್ಲಿ ವ್ಯಾಪಕವಾದ ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸುವ ಸಾಧ್ಯತೆಗಳನ್ನು ಸಹ ಚರ್ಚಿಸಲಾಯಿತು.

ಸೆಪ್ಟೆಂಬರ್ 30ರಂದು ಮಹಿಳಾ ಸಂಘರ್ಷ ಒಕ್ಕೂಟದವರು ನಡೆಸಿದ ಪ್ರತಿಭಟನಾ ಮೆರವಣಿಗೆಯಲ್ಲಿ ಸುಮಾರು 1,000ದಷ್ಟು ಮಹಿಳೆಯರು ಹಾಗೂ ಪುರುಷರು ಭಾಗವಹಿಸಿದ್ದರು. ಮಹಿಳಾ ಸಂಘರ್ಷ ಒಕ್ಕೂಟದ ಸದಸ್ಯರಲ್ಲದೆ ಮೈಸೂರಿನ ಸಮತಾ, ಎಡಪಂಥೀಯ ಮತ್ತು ಜನತಾಂತ್ರೀಯ ಸಂಘಟನೆಗಳು, ಮಾನವ ಹಕ್ಕುಗಳ ಸಂಘಟನೆಗಳು, ದಲಿತ ಸಂಘಟನೆಗಳು, ಕಾರ್ಮಿಕ ಸಂಘಟನೆಗಳು ಎಲ್ಲರೂ ರ್‍ಯಾಲಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ತಮ್ಮ ಬೆಂಬಲವನ್ನು ವ್ಯಕ್ತಪಡಿಸಿದರು. ಟೌನ್‌ಹಾಲ್‌ನಿಂದ CTO ವೃತ್ತದವರೆಗೆ ನಡೆದ ಈ ಮೆರವಣಿಗೆಯಲ್ಲಿ ಮಹಿಳೆಯರೇ ಮಾಡಿದ ಹಲವಾರು ಭಿತ್ತಿಚಿತ್ರಗಳನ್ನು ಹಿಡಿಯಲಾಗಿತ್ತಲ್ಲದೆ, ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸುವ ಮತ್ತು ಅಮಿತಾಬಚ್ಚನ್, ಪಟೇಲ್ ಮತ್ತು ದೇವೇಗೌಡರ ವಿರುದ್ಧದ ಸ್ಲೋಗನ್‌ಗಳನ್ನು ಸಹ ಕೂಗಲಾಯಿತು.

ಮೆರವಣಿಗೆಯ ನಂತರ ಪ್ರತಿಭಟನಾ ಸಭೆಯನ್ನು ಏರ್ಪಡಿಸಲಾಗಿತ್ತು. ಸಭೆಯನ್ನು ಉದ್ದೇಶಿಸಿ ಮಹಿಳಾ ಸಂಘರ್ಷ ಒಕ್ಕೂಟದ ಪರವಾಗಿ ವಿ. ಗಾಯತ್ರಿಯವರು ಮಾತನಾಡುತ್ತಾ ಬಹುರಾಷ್ಟ್ರೀಯ ಕಂಪನಿಗಳ ವ್ಯಾಪಾರ ಲಾಭಕ್ಕಾಗಿ ನಡೆಸುತ್ತಿರುವ ಸೌಂದರ್ಯ ಸ್ಪರ್ಧೆಯನ್ನು ಒಕ್ಕೊರಲಿನಿಂದ ಪ್ರತಿಭಟಿಸಬೇಕೆಂದರಲ್ಲದೆ, ಸಂಸ್ಕೃತಿಯ ಹೆಸರಿನಲ್ಲಿ ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸುತ್ತಿರುವ ಕೋಮುವಾದಿ ಶಕ್ತಿಗಳನ್ನು ವಿರೋಧಿಸಬೇಕಾಗಿದೆಯೆಂದರು. ಜನವಾದಿ ಮಹಿಳಾ ಸಂಘಟನೆಯ ವಿಮಲ ಅವರು "ಸೌಂದರ್ಯ ಸ್ಪರ್ಧೆ ವಿರೋಧಿ ಕ್ರಿಯಾ ಸಮಿತಿ"ಯ ಪರವಾಗಿ ಮಾತನಾಡಿ, ಕರ್ನಾಟಕದ ಮುಖ್ಯಮಂತ್ರಿಯವರು ಮಹಿಳೆಯರ ಬಗ್ಗೆ ಹಗುರವಾಗಿ ಮಾತನಾಡುತ್ತಿರುವುದನ್ನು ಬಲವಾಗಿ ಖಂಡಿಸಿದರು. ಸಮತಾರವರು ನೀಡಿದ ಪ್ರತಿಭಟನಾ ಹೇಳಿಕೆಯನ್ನು ಸಹ ಸಭೆಯಲ್ಲಿ ಓದಲಾಯಿತು. ದುಡಿಯೋರ ಹೋರಾಟದ ಜಗದೀಶ್, ಪಿಡಿಎಫ್‌ನ N. ರಮೇಶ್, ಕರ್ನಾಟಕ ವಿಮೋಚನಾ ರಂಗದ ಬಂಜಗೆರೆ ಜಯಪ್ರಕಾಶ್, ಮಹಿಳಾ ಸಾಂಸ್ಕೃತಿಕ ಸಂಘಟನೆಯ ಪ್ರತಿಮಾ, ದಲಿತ ವಿದ್ಯಾರ್ಥಿ ಒಕ್ಕೂಟದ ದೇವೇಂದ್ರ ಹೆಗ್ಗಡೆ, J. L ಮಾರಿಸನ್ ಕಾರ್ಮಿಕ ಸಂಘಟನೆಯ ಪ್ರತಿನಿಧಿ, ಪಿಯುಸಿಎಲ್‌ನ ಹಸನ್ ಮನ್ಸೂರ್ ಮತ್ತು ರೈತನಾಯಕಿ ಅನುಸೂಯಮ್ಮ ಅವರುಗಳು ಸಹ ಸೌಂದರ್ಯ ಸ್ಪರ್ಧೆ ವಿರೋಧಿಸುವುದರ ಜತೆಗೆ ಮಹಿಳಾ ಸಂಘರ್ಷ ಒಕ್ಕೂಟಕ್ಕೆ ಹೋರಾಟದಲ್ಲಿ ಬೆಂಬಲ ವ್ಯಕ್ತಪಡಿಸಿ ಸಭೆಯಲ್ಲಿ ಮಾತನಾಡಿದರು. ಮಹಿಳಾ ಜಾಗೃತಿಯವರು, ಸರ್ಕಾರದ ಸಾಮ್ರಾಜ್ಯಶಾಹಿ ನೀತಿಯನ್ನು ಕುರಿತು, ವಿಮೋಚನದ ಚಿತ್ರ ಹಾಡನ್ನು ಹಾಡಿದರು. ಒಕ್ಕೂಟದಿಂದ ಸೌಂದರ್ಯ ಸ್ಪರ್ಧೆಯ ಹಿಂದಿರುವ ವಿವಿಧ ಧೋರಣೆಯನ್ನು ಕುರಿತು ನಾಟಕ ಮಾಡಲಾಯಿತು. ನಂತರದಲ್ಲಿ ಒಕ್ಕೂಟ ತನ್ನದೇ ಮಟ್ಟದಲ್ಲಿಯೂ ಮತ್ತು ಸೌಂದರ್ಯ ಸ್ಪರ್ಧೆ ವಿರೋಧಿ ಕ್ರಿಯಾ ಸಮಿತಿಯ ಜತೆಗೂಡಿಯೂ ತನ್ನ ಪ್ರತಿಭಟನೆಯನ್ನು ತೀವ್ರಗೊಳಿಸಿತು.

ಸೆ. ೨೮ರಂದು ಮಹಿಳಾ ಜಾಗೃತಿ ಸಂಘಟನೆಯವರು ಶಿವಮೊಗ್ಗದಲ್ಲಿ ಪ್ರತಿಭಟನಾ ಸಮಾವೇಶವನ್ನು ಏರ್ಪಡಿಸಿದ್ದರು. ಸಭೆಯಲ್ಲಿ ಭಾಷಣವು ಅಲ್ಲವೆ ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ನಗರದ ಮುಖ್ಯ ಬೀದಿಗಳಲ್ಲಿ ಮಹಿಳಾ ಶೋಷಣೆ ಹಾಗು ಸರ್ಕಾರದ ನೀತಿಯ ವಿರುದ್ಧ ಘೋಷಣೆ ಕೂಗಿ, ಪಂಜಿನ ಮೆರವಣಿಗೆಯನ್ನು ನಡೆಸಲಾಯಿತು. ಕೊನೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಪ್ರತಿಕೃತಿಯನ್ನು ದಹನ ಮಾಡಲಾಯ್ತು.

ಸೆ. ೧೧ರಂದು, ಅಖಿಲ ಭಾರತ ಮಹಿಳಾ ಸಾಂಸ್ಕೃತಿಕ ಸಂಘಟನೆ, ಅಖಿಲ ಭಾರತ ಪ್ರಜಾಸತ್ತಾತ್ಮಕ ವಿದ್ಯಾರ್ಥಿ ಸಂಘಟನೆ, ಅಖಿಲ ಭಾರತ ಪ್ರಜಾಸತ್ತಾತ್ಮಕ ಯುವ ಸಂಘಟನೆಯ ಆಶ್ರಯದಲ್ಲಿ ಪ್ರತಿಭಟನಾ ಮೆರವಣಿಗೆಯನ್ನು ನಡೆಸಲಾಯಿತು. ಇವೇ ಸಂಘಟನೆಗಳು ಅ. ೧ರಂದು ಸೌಂದರ್ಯ ಸ್ಪರ್ಧೆ ವಿರೋಧಿ ಸಮಾವೇಶವನ್ನು ಏರ್ಪಡಿಸಿದ್ದರು. ನಿವೃತ್ತ ನ್ಯಾಯಾದೀಶರುಗಳು, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರು ಹಾಗು ಇತರರು ಮಾತನಾಡಿದರು. ಅಲ್ಲದೆ ಅನೇಕ ಗಣ್ಯರುಗಳು ಕಳಿಸಿದ ಸಂದೇಶಗಳನ್ನು ಓದಲಾಯ್ತು.

**ಸೌಂದರ್ಯ ಸ್ಪರ್ಧೆ ವಿರೋಧೀ ಕ್ರಿಯಾ ಸಮಿತಿ :**

ವಿವಿಧ ಸಂಘಟನೆಗಳ ಸಮ್ಮುಖದಲ್ಲಿ ಸೆಪ್ಟೆಂಬರ್ ಹತ್ತರಂದು ರೂಪುಗೊಂಡ ಈ ಕ್ರಿಯಾ ಸಮಿತಿ ಮುಖ್ಯಮಂತ್ರಿ ಮನೆಯ ಮುಂದೆ ಧರಣಿ ನಡೆಸುವುದರೊಂದಿಗೆ ತನ್ನ

ಪ್ರತಿಭಟನೆಯನ್ನು ಪ್ರಾರಂಭಿಸಿತು. ಪೋಸ್ಟ್‌ಕಾರ್ಡ್ ಆಂದೋಲನ, ಬೀದಿಬದಿಯ ಸಭೆಗಳನ್ನು ಕ್ರಿಯಾ ಸಮಿತಿ ಹಮ್ಮಿಕೊಳ್ಳುತ್ತಿದ್ದಂತೆಯೇ ಮತ್ತಷ್ಟು ವಿಶಾಲ ವೇದಿಕೆಯನ್ನ ನಿರ್ಮಿಸುವ ಮಹಿಳಾ ಸಂಘರ್ಷ ಒಕ್ಕೂಟ ಮತ್ತು ಪಿಡಿಎಫ್-ಕೆವಿಆರ್‌ಗಳ ಅಭಿಪ್ರಾಯಕ್ಕೆ ಸಮ್ಮತಿ ಸೂಚಿಸಿ ಅಕ್ಟೋಬರ್ 2ರಂದು ಮೇಲಿನ ಸಂಘಟನೆಗಳು ಸೇರಿದಂತೆ AIDSO, AIDYO, MSS, ಬಂಡಾಯ ಸಾಹಿತ್ಯ ಸಂಘಟನೆ, ಮಹಿಳಾ ಸಂಘರ್ಷ ಒಕ್ಕೂಟ, PDF, KVR, ದುಡಿಯೊರ ಹೋರಾಟ ಮತ್ತು ಕ್ರಿಯಾ ಸಮಿತಿ ಎಲ್ಲ ಸೇರಲಾಯಿತು. ಈ ಸಭೆಯಲ್ಲಿ ಡಾ. ವಿಜಯ ಅವರನ್ನು ಸಂಚಾಲಕಿಯನ್ನಾಗಿ ಉಳ್ಳ ವೇದಿಕೆಯನ್ನು ನಿರ್ಮಿಸಿ 'ಸೌಂದರ್ಯ ಸ್ಪರ್ಧೆ ವಿರೋಧೀ ಕ್ರಿಯಾ ಸಮಿತಿ' ಎಂಬ ಹೆಸರನ್ನೇ ಸರ್ವರ ಸಮ್ಮತಿಯಿಂದ ಮುಂದುವರಿಸಲಾಯಿತು. ಬಹು ಸಂಘಟನೆಗಳ ಸಮನ್ವಯವಾದ ಈ ಕ್ರಿಯಾ ಸಮಿತಿ ಮೊದಲಿಗೆ ಅಕ್ಟೋಬರ್ 9ರಂದು ರಾಜ್ಯಮಟ್ಟದ ಸಮಾವೇಶವನ್ನು ಏರ್ಪಡಿಸಿತು.

ಜಂಟಿ ಕರಪತ್ರವನ್ನು ಹೊರಡಿಸುವುದರ ಮೂಲಕ ಅಕ್ಟೋಬರ್ 23ರಿಂದ ಪ್ರಚಾರ ಸಪ್ತಾಹವನ್ನು ಕೈಗೊಂಡಿತು. ಸೌಂದರ್ಯ ಸ್ಪರ್ಧೆ ವಿರೋಧಿ ಕ್ರಿಯಾಸಮಿತಿಯು ಅ. ೨೩ರಂದು ಪ್ರಚಾರ ಸಪ್ತಾಹವನ್ನು ಬೆಂಗಳೂರಿನ ಮೆಜೆಸ್ಟಿಕ್ ಬಸ್ ನಿಲ್ದಾಣದಲ್ಲಿ ಪ್ರಾರಂಭವಾಯಿತು. ಅನೇಕ ಗಣ್ಯರು ಮಾತನಾಡಿದ ಬಳಿಕ, ಇಡೀ ಬಿ.ಟಿ.ಎಸ್. ಹಾಗು ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದಲ್ಲಿ ಪ್ರತಿಭಟನಾ ಮೆರವಣಿಗೆಯನ್ನು ನಡೆಸಲಾಯಿತು. ಅಂದಿನಿಂದ ಪ್ರಾರಂಭವಾದ ಸಪ್ತಾಹವು 26, 27ನೇ ತಾರೀಖಿನ ಹೊರತು (ಪುರಸಭೆ ಚುನಾವಣೆ ಪ್ರಯುಕ್ತ) 30ನೇ ತಾರೀಖಿನವರೆಗೆ ನಗರದ ವಿವಿಧ ಬಡಾವಣೆಗಳಲ್ಲಿ ಬೀದಿ ಬದಿ ಸಭೆಗಳನ್ನು ನಡೆಸಲಾಯಿತು. 31ನೇ ತಾರೀಖು ಕ್ರಿಕೆಟ್ ಸ್ಟೇಡಿಯಂನ ಎದುರು ಸಾರ್ವಜನಿಕ ಸಭೆಯನ್ನು ಕರೆಯಲಾಗಿತ್ತು. ನವೆಂಬರ್ 9ರಂದು ಗಾಂಧಿ ಭವನದಲ್ಲೂ ಚರ್ಚಾಸಭೆಯನ್ನು ನಡೆಸಲಾಯಿತು. ನ. 17ರಂದು ರಾಜ್ಯಮಟ್ಟದ ರ್ಯಾಲಿಯನ್ನು ನಡೆಸಲಿದೆ.

ಕ್ರಿಯಾ ಸಮಿತಿಯೊಂದಿಗೆ ಜಂಟಿ ಕಾರ್ಯದಲ್ಲಿ ತೊಡಗಿಕೊಳ್ಳುವುದರ ಜೊತೆಗೆ ಅದರ ಅನೇಕ ಸದಸ್ಯ ಸಂಘಟನೆಗಳು ತಮ್ಮದೇ ಮಟ್ಟದಲ್ಲಿ ಕೂಡ ಪ್ರತಿಭಟನಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಅ. ೨೯ರಂದು ಮಹಿಳಾ ಜಾಗೃತಿಯವರು, ವಿಶ್ವಸುಂದರಿ ಸ್ಪರ್ಧೆಯ ಪ್ರಮುಖ ಪ್ರಾಯೋಜಕರಾದ ಗೋದ್ರೆಜ್ ಕಂಪನಿಯ ಮುಂದೆ ಪಿಕೆಟಿಂಗ್ ನಡೆಸುವ ಕಾರ್ಯಕ್ರಮವನ್ನಿಟ್ಟುಕೊಂಡಿದ್ದರು. ಮಹಿಳಾ ಸಂಘರ್ಷ ಒಕ್ಕೂಟದಲ್ಲಿ ಸದಸ್ಯ ಸಂಘಟನೆಗಳು ನಡೆಸುವ ಪ್ರತಿಭಟನೆಗೆ ಬೆಂಬಲ ಸೂಚಿಸಬೇಕೆಂದು ಮೊದಲೆ ನಿರ್ಧಾರವಾಗಿದ್ದಂತೆ ಅಂದೂ ಸಹ ಒಕ್ಕೂಟದ ಸದಸ್ಯರು, ಗೋದ್ರೆಜ್ ಪಿಕೆಟಿಂಗ್ ಕಾರ್ಯಕ್ರಮದಲ್ಲಿ ಬೆಂಬಲ ಸೂಚಿಸಲು ಹೋಗಿದ್ದರು. ಪ್ರತಿಭಟನೆಯು ಶಾಂತಿಪೂರ್ವಕವಾಗಿರಬೇಕೆಂದು ತೀರ್ಮಾನಿಸಲಾಗಿತ್ತು. ಪ್ರತಿಭಟನೆಯ ಸಮಯದಲ್ಲಿ, ಪೋಲಿಸರು ನಡುವೆ ಪ್ರವೇಶಿಸಿ, ಚಳುವಳಿಗಾರರೊಂದಿಗೆ ಅಮಾನವೀಯವಾಗಿ ವರ್ತಿಸಿ, ಅವರನ್ನು ಬಂದಿಸಿದ್ದಾರೆ. ಎಷ್ಟೊ ಹೊತ್ತಿನವರೆಗೆ ವಕೀಲರನ್ನು ಭೇಟಿಯಾಗಲು ಅನುಮತಿ ನೀಡಲಿಲ್ಲ. ಈಗಲೂ, ಮಾನಸ ಮುದ್ರಣಕ್ಕೆ ಹೋಗುತ್ತಿರುವ ಹೊತ್ತಿನಲ್ಲೂ ಅವರಿಗಿನ್ನು ಜಾಮೀನು ಸಿಕ್ಕಿಲ್ಲ.

ಚಳುವಳಿಗಾರರನ್ನು ಪ್ರಜಾಸತ್ತಾತ್ಮಕತೆಗೆ ವಿರೋಧವಾಗಿ ಬಂಧಿಸಿರುವುದನ್ನು ವಿರೋಧಿಸಿ ಮಹಿಳಾ ಸಂಘರ್ಷ ಒಕ್ಕೂಟದವರು ಪತ್ರಿಕಾ ಹೇಳಿಕೆಯೊಂದನ್ನು ನೀಡಿದರು. ಈ ನಡುವೆ ಪೋಲಿಸ್ ಕಮೀಶನರಾದ ಶ್ರೀ. ಬರ್ಮನ್‌ರವರು, ಜೈಲಿನಲ್ಲಿ ಬಂಧಿಯಾಗಿರುವವರನ್ನು ನೋಡಲು ಬರುವ ಯಾರನ್ನೇ ಆಗಲಿ (ಸಂಬಂಧಿಕರನ್ನು ಸಹ) ಸಂಚಿನಲ್ಲಿ ಪಾಲುಗಾರರೆಂದು (Abestors to aconspirasy) ಪರಿಗಣಿಸಬೇಕೆಂದು ಆಜ್ಞೆ ಹೊರಡಿಸಿದರು. ಈ ಆಜ್ಞೆಯ ಮೇರೆಗೆ ಪೋಲಿಸರು, ವ್ಯವಸ್ಥಿತವಾಗಿ ನೋಡಲು ಬರುವ ಸ್ನೇಹಿತರು, ಸಂಬಂಧಿಕರನ್ನು ಗಂಟೆಗಟ್ಟಲೆ ವಿಚಾರಣೆಗೆ ಒಳಪಡಿಸಿದ್ದಾರೆ ಹಾಗು ಕೆಲವರನ್ನು ಬಂಧಿಸಿದ್ದಾರೆ.

ಮಾನಸ ಬಳಗದವರು, ಇತರ ಮಹಿಳಾ ಹಾಗು ಪ್ರಗತಿಪರ ಗುಂಪುಗಳನ್ನು ಸಂಪರ್ಕಿಸಿ, ಅವರ ಬೆಂಬಲದೊಂದಿಗೆ ಪೋಲಿಸ್ ಕಮೀಶನ್‌ರವರ ಆಜ್ಞೆಯನ್ನು ಖಂಡಿಸಿ ಪೋಲಿಸ್ ಕಮೀಶನ್‌ರವರ ಆಜ್ಞೆಯನ್ನು ಖಂಡಿಸಿ ಪತ್ರಿಕಾ ಹೇಳಿಕೆ ನೀಡಿದರು. ಈ ಘಟನೆಗೆ ಸಂಬಂಧಿಸಿದಂತೆ ಇತರ ಪ್ರಮುಖ ಪ್ರಜಾಸತ್ತಾತ್ಮಕ ಹಕ್ಕುಗಳ ಸಂಘಟನೆಗಳು ಕಾರ್ಯಾಚರಣೆಯನ್ನು ಮುಂದುವರಿಸಿವೆ. ಪಿ.ಯು.ಸಿ.ಎಲ್. ಹಾಗು ಕಾರ್ಮಿಕ ಸಂಘಟನೆಗಳು ಚಳುವಳಿಗಾರರಿಗೆ ಬೆಂಬಲ ಸೂಚಿಸಿ ಹೇಳಿಕೆ ನೀಡಲು ನಿರ್ಧರಿಸಿವೆ.

ಕರ್ನಾಟಕ ವಿಮೋಚನಾ ರಂಗ, ಸಾಮ್ರಾಜ್ಯಶಾಹೀ ವಿರೋಧೀ ಒಕ್ಕೂಟ ಮತ್ತು ಕರ್ನಾಟಕ ರಾಜ್ಯ ರೈತ ಸಂಘಗಳು ಪ್ರಚಾರ ಸಭೆಗಳನ್ನು ನಡೆಸುವುದರ ಮೂಲಕ, ಭಿತ್ತಿಪತ್ರಗಳನ್ನು ಅಂಟಿಸುವುದರ ಮೂಲಕ ಪ್ರತಿಭಟನೆಯನ್ನು ತೀವ್ರಗೊಳಿಸುತ್ತಿವೆ.

'ವಿಮೋಚನಾ' ಮಹಿಳಾ ಸಂಘಟನೆ ಪ್ರತಿ ಗುರುವಾರ ನಡೆಸುವ "ಕಪ್ಪು ಉಡುಪಿನಲ್ಲಿ ಮಹಿಳೆಯರು" ಪ್ರತಿಭಟನಾ

ದಿನವನ್ನು ಸೌಂದರ್ಯ ಸ್ಪರ್ಧೆ ವಿರೋಧೀ ಚಟುವಟಿಕೆಗೆ ಮೀಸಲಾಗಿಡುತ್ತಿದೆ.

ಭಾರತದ ವಿವಿಧೆಡೆಯು ಪ್ರತಿಭಟನೆಗಳು ನಡೆದಿವೆ. ಸುಂದರಿಯರು ದೆಹಲಿಗೆ ಬಂದಿಳಿದ ಸಂದರ್ಭದಲ್ಲಿ, ಅಲ್ಲಿನ ಮಹಿಳಾ ಹಾಗು ಪ್ರಜಾಸತ್ತಾತ್ಮಕ ಸಂಘಟನೆಗಳು ೮೦೦ ಜನರ ರ್‍ಯಾಲಿಯನ್ನು ನಡೆಸಿದರು. ರ್‍ಯಾಲಿಯ ಬಗ್ಗೆ ಯಾವ ಪತ್ರಿಕೆಗಳು ಬರೆಯಲಿಲ್ಲ. ಏಶಿಯಾ ನ್ಯೂಸ್ ಎಂಬ ಪತ್ರಿಕೆ ೨ ಸಾಲುಗಳ ವರದಿ ಮಾಡಿತು.

ಬರೋಡಾದ ಮಹಿಳಾ ಸಂಘಟನೆಗಳು ಸ್ಪರ್ಧೆಯನ್ನು ವಿರೋಧಿಸಿ ದೊಡ್ಡ ರ್‍ಯಾಲಿಯನ್ನು ನಡೆಸಿದವು.

ಲಾಭಕ್ಕಾಗಿ ಮಹಿಳೆಯರ ದೇಹವನ್ನು ಸರಕಾಗಿಸುವ ಬಂಡವಾಳಶಾಹಿ ಶಕ್ತಿಗಳ ವಿರುದ್ಧ ನಾವು ದನಿ ಎತ್ತುತ್ತಲೆ ಬಂದಿದ್ದೇವೆ. ನಮ್ಮ ದನಿಯು `ಮಹಿಳಾ ಪರ' ಎಂಬ ಮುಖವಾಡ ಧರಿಸಿ, ಪ್ರತಿಭಟಿಸುವ ಕೋಮುವಾದಿ ಶಕ್ತಿಗಳ ದನಿಯೊಂದಿಗೆ ಘರ್ಷಣೆಗೊಳಪಟ್ಟಿದೆ. ಭಾರತೀಯ ಸಂಸ್ಕೃತಿಯ, ಭಾರತೀಯ ನಾರಿಯ ಘನತೆಗೆ ಅಪಾಯ ಒದಗಿದೆ, ಅದನ್ನು `ಕಾಪಾಡ'ಬೇಕೆನ್ನುವುದೇ ಈ ಶಕ್ತಿಗಳ ಉದ್ದೇಶ. ಬಿ.ಜೆ.ಪಿ, ಶಿವಸೇನೆಯಂತ ಪಕ್ಷಗಳು ತಮ್ಮ ಚುನಾವಣಾ ಪ್ರಣಾಳಿಕೆಯಲ್ಲಿ ಸ್ಟಿಕರ್ ಬಿಂದಿ ಹಾಗು ಕುಂಕುಮದ ದರವನ್ನು ಇಳಿಸುವ ಭರವಸೆಯನ್ನಿತ್ತಿದ್ದಾರೆ! ಈ ರೀತಿಯ ಶಕ್ತಿಗಳೆ ರೂಪ್‌ಕನ್ವರ್ ಸುಟ್ಟು ಸತಿಯಾದುದ್ದಕ್ಕೆ ವಾಹ ಎಂದಿದ್ದವು, ಭವರಿ ಬಾಯಿಯ ಮೇಲೆ ಅತ್ಯಾಚಾರವೆಸಗಿದವರನ್ನು ಸನ್ಮಾನಿಸಿದವು. ಇಲ್ಲಿ ಬೆಂಗಳೂರಿನಲ್ಲಿ ಸೌಂದರ್ಯ ಸ್ಪರ್ಧೆಯನ್ನು ಅಶ್ಲೀಲ, ಸಂಸ್ಕೃತಿಗೆ ಮಾರಕ ಎನ್ನುವ ಆಧಾರದ ಮೇಲೆ ಕೂಗೆಬ್ಬಿಸಿದ ಕೋಮುವಾದಿ ಮಹಿಳಾ ಗುಂಪಿಗೆ ಕೋಮುವಾದಿ ಶಕ್ತಿಗಳು ಕೈಗೂಡಿಸಿರುವುದು ಆಶ್ಚರ್ಯವೇನಲ್ಲ.

ಈಗ ನಮ್ಮ ಮುಂದಿರುವುದು ಸ್ಪರ್ಧೆಯನ್ನು ನಿಲ್ಲಿಸಲು ಸಾಧ್ಯವೇ ಇಲ್ಲವೆ ಎಂಬುದಲ್ಲ. ಸತ್ಯವೇನೆಂದರೆ, ಪ್ರತಿಭಟನೆಯ ಪ್ರಬಲ ದನಿಯನ್ನು ಹತ್ತಿಕ್ಕಿ ಸ್ಪರ್ಧೆ ನಡೆದೇ ತೀರಬೇಕೆಂದು ಪಣ ತೊಟ್ಟಿರುವ ಜೆ.ಹೆಚ್. ಪಟೇಲ್ ಸರ್ಕಾರದ ನಿಲುವನ್ನು ನೋಡಿದರೆ, ಇದರ ಹಿಂದಿನ ಬಲಿಷ್ಠ ವ್ಯಾಪಾರಿ ಆಸಕ್ತಿಯ ಅರಿವಾಗುತ್ತದೆ. ಇಲ್ಲಿ ಮುಖ್ಯ ಅಂಶವೇನೆಂದರೆ, ಪ್ರಬಲ ಪ್ರತಿಭಟನಾ ದನಿಯೊಂದಿಲ್ಲದಿದ್ದರೆ, ಸೌಂದರ್ಯ ಸ್ಪರ್ಧೆಯು ಯಾವುದೇ ವಿವಾದವಿಲ್ಲದ, ಮಾಮೂಲಿ ಸಾಂಸ್ಕೃತಿಕ ಘಟನೆಯಂತೆ ಜರುಗಿ ಹೋಗುತ್ತಿತ್ತು. ಪ್ರತಿಭಟನೆಯು ಜನತೆಯ ಮನದಲ್ಲಿ ಪ್ರಶ್ನೆಗಳನ್ನೆತ್ತಿದೆ, ಚಿಂತನೆಗೆ ಹಚ್ಚಿದೆ.

ಆದರೆ, ಮುಖ್ಯವಾಹಿನಿಯ ಮಾಧ್ಯಮಗಳು ಮಹಿಳಾ ಸಂಘಟನೆಗಳ, ಪ್ರಗತಿಪರ ಸಂಘಟನೆಗಳ ಪ್ರತಿಭಟನೆಯನ್ನು ಸಂಪೂರ್ಣವಾಗಿ ಮೂಲೆಗೆ ತಳ್ಳಿವೆ. ಕೋಮುವಾದಿ ಸಂಘಟನೆಯ ಉನ್ಮಾದಕಾರಿ ಹೇಳಿಕೆಗಳನ್ನು ಎತ್ತಿ ಹಿಡಿದು, ಪ್ರತಿಭಟನೆಯ ನಿಜವಾದ ದನಿಯನ್ನು ಜನತೆಯಿಂದ ಮರೆಮಾಚಿಸಿವೆ. ಇದು ಅವುಗಳಿಗಿರುವ ಸೌಂದರ್ಯ, ಜಾಹೀರಾತು ಉದ್ದಿಮೆಗಳ ಮೇಲಿನ ವ್ಯಾಪಾರಿ ಆಸಕ್ತಿಯನ್ನು ನಿಚ್ಚಳವಾಗಿ ತೋರಿಸುತ್ತದೆ. ಆದ್ದರಿಂದ ಪ್ರತಿಭಟನೆಗಳನ್ನು ದಾಖಲಿಸುವ ಪ್ರಯತ್ನವನ್ನು ಮಾನಸ ಮಾಡುತ್ತಿದೆ.

●

---

(17ನೇ ಪುಟದಿಂದ)

ಇಲ್ಲಿ ಸೇರುತ್ತದೆ. ಅದೇ ಸಮಯದಲ್ಲಿ ದಂತ ತಜ್ಞರು ಹುಡುಗಿಯರ ಹಲ್ಲು ಸ್ಫಟಿಕದ ಮಣಿಯಂತೆ ಶುಭ್ರ ಬಿಳಿಯಾಗಿ ಹೊಳೆಯುವಲ್ಲಿ ಕೆಲಸ ಮಾಡುತ್ತಾರೆ.

ತೀರ್ಪುಗಾರರ ಮುಂದೆ ಪೆರೇಡ್ ಮಾಡಲು 'ನಡಿಗೆ' ತುಂಬಾ ಮುಖ್ಯ. ಅದನ್ನು ಕೆಲ ಗಂಟೆಗಳ ಅಭ್ಯಾಸದಿಂದ ಕಲಿಯಬಹುದು.

ತಮ್ಮ ಈ ಬಗೆಯ ಸೌಂದರ್ಯವರ್ಧನ ಚಿಕಿತ್ಸೆಯ ಬಗ್ಗೆ ಪೆರಿನಿಯವರಿಗೆ ಒಂಚೂರೂ ಕೆಡುಕೆನಿಸುವುದಿಲ್ಲ. ''ಇದೇನೂ ಸಹಜ ಸೌಂದರ್ಯೋತ್ಸವವಲ್ಲ, ಬರಿಯ ಸೌಂದರ್ಯ ಸ್ಪರ್ಧೆಯಷ್ಟೆ. ಉತ್ತಮ ಬಟ್ಟೆ ತೊಟ್ಟು, ಮೇಕಪ್ ಮಾಡಿಕೊಳ್ಳಬಹುದಾದರೆ, ವಕ್ರ ಅಂಗವನ್ನು ಶಸ್ತ್ರಕ್ರಿಯೆಯ ಮೂಲಕ ಸರಿ[illegible]ಡಿಸಿ ಅಂದವಾಗಿ ಕಾಣುವಂತೆ ಮಾಡುವುದರಲ್ಲೇನು [illegible] ಪ್ರಶ್ನಿಸುತ್ತಾರೆ. ಎಲ್ಲ ದೇಶಗಳ ಸ್ಪರ್ಧಿಗಳೂ ಪ್ಲಾಸ್ಟಿಕ್ ಸರ್ಜರಿಗೆ ವ್ಯಾಪಕವಾಗಿ ಮೊರೆಹೋಗುತ್ತಾರೆ. ಅವರ ಗುಟ್ಟನ್ನೂ ಯಾರೂ ವ್ಯವಸ್ಥಿತವಾಗಿ ಬಯಲಿಗೆಳೆದಿಲ್ಲ ಎಂದು ಪೆರಿನಿ ಹೇಳುತ್ತಾರೆ. ವೆನೆಸ್‌ಸುಲಾ ಅಕಡೆಮಿಗೆ ವರ್ಷವೊಂದಕ್ಕೆ ಅರ್ಧ ಮಿಲಿಯ ಡಾಲರ್‌ನ ಖರ್ಚಿದೆ. ಅದನ್ನು ಜಾಹಿರಾತಿನ ಮೂಲಕ ಸುಲಭವಾಗಿ ಪಡೆಯುತ್ತಾರೆ. ಪ್ಲಾಸ್ಟಿಕ್ ಸರ್ಜನ್‌ಗಳ ಸೇವೆ ಉಚಿತ. ಆದರೆ ಸೌಂದರ್ಯ ರಾಣಿಯರಿಗೆ ಶಸ್ತ್ರಕ್ರಿಯೆ ಮಾಡುವ ಇವರ ಬಿಸಿನೆಸ್ ಅತಿ ಬಿಸಿ.

●

# ವಿಶ್ವಸುಂದರಿಯ ಆಯ್ಕೆಯೋ?
# ಲಾಭಕೋರರ ದಂಧೆಯೋ?

(ಅಕ್ಟೋಬರ್ 30ರ ರ್ಯಾಲಿಗೆ "ಮಹಿಳಾ ಸಂಘರ್ಷ ಒಕ್ಕೂಟ" ಹೊರ ತಂದ ಕರಪತ್ರ)

ನವೆಂಬರ್ ತಿಂಗಳಲ್ಲಿ ಬೆಂಗಳೂರಿನಲ್ಲಿ ಸರ್ಕಾರದ ಶ್ರೀರಕ್ಷೆಯಲ್ಲಿ ವಿಶ್ವಸುಂದರಿ ಸ್ಪರ್ಧೆ ನಡೆಯಲಿದೆ. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಮುಕ್ತ ಆರ್ಥಿಕ ನೀತಿಗೆ ವಿಶಾಲವಾಗಿ ತೆರೆದುಕೊಂಡು ವಿದೇಶೀ ಸಾಲದ ಹೊರೆಯನ್ನು ಹೆಗಲಿಗೇರಿಸಿಕೊಂಡಿರುವ ಭಾರತದಲ್ಲೇ ೯೬ರ ವಿಶ್ವಸುಂದರಿ ಸ್ಪರ್ಧೆ ನಡೆಯಬೇಕೆಂಬುದು ಕಳೆದ ಸ್ಪರ್ಧೆಯ ಸಮಯದಲ್ಲೇ ತೀರ್ಮಾನವಾಗಿಹೋಗಿತ್ತು. ಆದೀಗ ಅಮಿತಾಬ್ ಬಚ್ಚನ್ ಕಾರ್ಪೋರೇಷನ್ ಕೃಪೆಯಿಂದ, ದೇವೇಗೌಡ-ಪಟೇಲರ ತುಂಬು ಹೃದಯದ ಆಹ್ವಾನದಿಂದ ಬೆಂಗಳೂರಿಗೇ ಕಾಲಿಟ್ಟಿದೆ. ಇದರಿಂದ ಬೆಂಗಳೂರಿನ/ಕರ್ನಾಟಕದ ಘನತೆಯ ಕಂಪು ವಿಶ್ವದೆಲ್ಲೆಡೆ ಹರಡಿ, ಇಲ್ಲಿನ ಪ್ರವಾಸೋದ್ಯಮ ನೂರ್ಮಡಿಗೊಂಡು, ವಿದೇಶೀ ವಿನಿಮಯ ಪ್ರವಾಹವಾಗಿ ಬೆಂಗಳೂರು ಎಲ್ಲರ ಪಾಲಿಗೆ ಸ್ವರ್ಗಸಮಾನವಾಗುತ್ತದೆಂದು ಲಾಭಕೋರ ಹಿತಾಸಕ್ತಿಗಳು ಬೀಗುತ್ತಾ ಎಲ್ಲರನ್ನೂ ನಂಬಿಸಲು ಪ್ರಯತ್ನಿಸುತ್ತಿದ್ದಾರೆ.

ವಿದೇಶೀ ಸಾಲವನ್ನು ಬಾಚಿ ಬೆನ್ನಿಗೇರಿಸಿಕೊಂಡ ಯಾವ ಮುಕ್ತ ಆರ್ಥಿಕ ನೀತಿ ಇದಕ್ಕೆ ಎಡೆ ಮಾಡಿಕೊಟ್ಟಿತೋ ಅದೇ ಆರ್ಥಿಕ ನೀತಿ ಈ ದೇಶದ ಹೆಂಗಸರಿಗೆ ಕೊಡುತ್ತಿರುವುದು ಏನನ್ನು? ದಿನೇ ದಿನೇ ದುಡಿಯುವ ಹೆಂಗಸರು ದೊಡ್ಡ ರೀತಿಯಲ್ಲಿ ಅಸಂಘಟಿತ ವರ್ಗಕ್ಕೆ ತಳ್ಳಲ್ಪಡುತ್ತಿದ್ದಾರೆ (ವಿಶೇಷವಾಗಿ ರಫ್ತು ಆಧಾರಿತ ಕೈಗಾರಿಕೆಗಳಲ್ಲಿ), ಸ್ವಯಂ ಸೇವೆಯ ಹೆಸರಲ್ಲಿ ಬಿಟ್ಟಿ ದುಡಿತಕ್ಕೆ ಪಕ್ಕಾಗುತ್ತಿದ್ದಾರೆ (ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ), ಬೃಹತ್ ಸಂಖ್ಯೆಯಲ್ಲಿ ವೇಶ್ಯಾವೃತ್ತಿಗೆ ನೂಕಲ್ಪಡುತ್ತಿದ್ದಾರೆ. 'ಕನ್ಸೂಮರಿಸಂ'ನ ತೀರದ ದಾಹದಲ್ಲಿ ಹೆಚ್ಚುತ್ತಿರುವ ಕೌಟುಂಬಿಕ, ಸಾಮಾಜಿಕ ಹಿಂಸೆಗಳಿಗೆ ಬಲಿಯಾಗುತ್ತಿದ್ದಾರೆ, ಅಗತ್ಯ ವಸ್ತು-ಸೇವೆಗಳ ಪೂರೈಕೆಯಿಲ್ಲದೆ ಬಳಲಿ ಬೆಂಡಾಗುತ್ತಿದ್ದಾರೆ. ಇದನ್ನೆಲ್ಲಾ ತೆರೆಮರೆಗೆ ಸರಿಸಿಬಿಡಲು ಪ್ರಯತ್ನಿಸುವ ಸೌಂದರ್ಯ ಸ್ಪರ್ಧೆ ಎತ್ತಿ ಹಿಡಿಯುವುದು ಈ ದೇಶದ ಯಾವ ಹೆಂಗಸರ ಘನತೆಯನ್ನು?

ಮಾರುಕಟ್ಟೆ ಆಸಕ್ತಿಯ ಈ ಸೌಂದರ್ಯ ಸ್ಪರ್ಧೆಗಳು ಹೆಂಗಸಿನ ದೇಹವನ್ನು ಛಿನ್ನ-ಭಿನ್ನಗೊಳಿಸಿ, ಪ್ರತಿ ಅಂಗವನ್ನೂ ಪ್ರತ್ಯೇಕ ಪರೀಕ್ಷೆಗೆ ಒಳಪಡಿಸುತ್ತವೆ. ಇಂತಿಷ್ಟೇ ಅಳತೆಯ, ಇಂಥದೇ ಸ್ವರೂಪದ ಅಂಗಾಂಗಗಳನ್ನುಳ್ಳ 'ಕನ್ಸೂಮರಿಸ್ಟ್ ಆದರ್ಶ ಸುಂದರಿ'ಯ ಚಿತ್ರವನ್ನು ಸೃಷ್ಟಿಸಿ, ವಿರೂಪಗೊಂಡ ಸೌಂದರ್ಯದ ಕಲ್ಪನೆಯನ್ನು ಯುವ ಜನಾಂಗಕ್ಕೆ ಕಾಣಿಕೆಯಾಗಿ ನೀಡುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳಿಗೆ ಮಾರಬಲ್ಲ ಸಾಮರ್ಥ್ಯವುಳ್ಳ ದೇಹ ಮಾತ್ರ ಸುಂದರವಾದದ್ದೆಂಬ ವಿಕೃತತೆಯನ್ನು ಹುಟ್ಟುಹಾಕುತ್ತಿವೆ. ಹೆಂಗಸಿನ ದೈಹಿಕ ಸಮಗ್ರತೆಯನ್ನು ನಾಶಪಡಿಸಿ, ದೇಹದ ಮೇಲಿನ ಹಕ್ಕನ್ನೂ ಕಸಿದುಕೊಂಡು ಮಾರಾಟದ ವಸ್ತುವನ್ನಾಗಿಸುವ ಇಂತಹ ಕೆಟ್ಟ ಆಸಕ್ತಿಗಳ ವಿರುದ್ಧ ನಾವು, ಮಹಿಳೆಯರು ಹೋರಾಡುತ್ತಲೇ ಬಂದಿದ್ದೇವೆ.

ಇಂದು, ಮುಕ್ತ ಆರ್ಥಿಕತೆಗೆ ತೆರೆದುಕೊಂಡಿರುವ ಈ ದೇಶದ ಬೃಹತ್ ಮಾರುಕಟ್ಟೆಯ ಮೇಲೆ ಪ್ರಪಂಚದ ಸೌಂದರ್ಯ ಸಾಧನಗಳನ್ನು ತಯಾರಿಸುವ ಕಂಪನಿಗಳಿಗೆ ಕಣ್ಣಿದೆ. ಭಾರತದಂತಹ ದೇಶದಲ್ಲಿ ದಿನೇ ದಿನೇ ಬೆಳೆಯುತ್ತಿರುವ ಹೊಸ ಮಧ್ಯಮ ವರ್ಗದ ಹೆಂಗಸರಲ್ಲಿ ಸೌಂದರ್ಯಸಾಧನಗಳ ಶಕ್ತಿಶಾಲೀ ಬಳಕೆದಾರರನ್ನು ಇವು ಕಾಣುತ್ತಿವೆ. ಹೆಂಗಸರಲ್ಲಿ ಸುಳ್ಳು ಅವಶ್ಯಕತೆಗಳನ್ನು ಸೃಷ್ಟಿಸುವುದರ ಮೂಲಕ, ಈ ಪಿತೃಪ್ರಧಾನ ಆಸಕ್ತಿಗಳು ಅವರನ್ನು ಒಂದು ಪ್ರತ್ಯೇಕವಾದ ಬಳಕೆದಾರರ ಗುಂಪಾಗಿಯೇ ರೂಪಿಸುತ್ತಿವೆ. ಸೌಂದರ್ಯ ಸಾಧನಗಳನ್ನು ಬಳಸಲೇಬೇಕೆನ್ನುವ ಒತ್ತಡದಲ್ಲಿ ಇಪ್ಪತ್ತಿನ ಯುವಜನಾಂಗ ದೇಹ ಮಾರಿಕೊಳ್ಳುವ ಮಟ್ಟಕ್ಕೂ ತಲುಪಿದೆ.

ಇವೆಲ್ಲವರ ಜತೆಗೆ, ವಿಶ್ವಸುಂದರಿ ಸ್ಪರ್ಧೆ ಭಾರತೀಯ ಸಂಸ್ಕೃತಿಗೆ ಅವಹೇಳನಕರವಾದದ್ದೆಂದು ಪ್ರತಿಭಟಿಸುವ ನೆಪದಲ್ಲಿ, ಸಂಸ್ಕೃತಿಯ ವಕ್ತಾರರಂತೆ ವರ್ತಿಸುವ ಶಕ್ತಿಗಳಿದ್ದಾರೆ. ಈ ಮೂಲಭೂತವಾದೀ ಶಕ್ತಿಗಳು ನಮ್ಮನ್ನು ಮತ್ತೆ ಮತ್ತೆ ಸತೀ, ಪರದಾಗಳಂತಹ ಕ್ರೂರ ಸಾಂಪ್ರದಾಯಿಕ ಚೌಕಟ್ಟುಗಳಿಗೆ ತಳ್ಳಲು ಪ್ರಯತ್ನಿಸುತ್ತಾರೆ. ಹೆಂಗಸರ ಹಕ್ಕುಗಳನ್ನೇ

ವಿರೋಧಿಸುವ ಇವರನ್ನು ನಾವು ಬಲವಾಗಿ ಪ್ರತಿಭಟಿಸುತ್ತೇವೆ. ನಾವು ನಮ್ಮನ್ನು ಇನ್ನೂ ಸುಟ್ಟುಕೊಳ್ಳಲು, ದಾಸ್ಯಕ್ಕೆ ಕೊಟ್ಟುಕೊಳ್ಳಲು ಸಿದ್ಧರಿಲ್ಲ ಎಂದು ಈ ಶಕ್ತಿಗಳಿಗೆ ಕೂಗಿ ಹೇಳುತ್ತೇವೆ.

ಒಟ್ಟಾರೆಯಲ್ಲಿ, ಮಹಿಳೆಯರ ಹಕ್ಕು-ಘನತೆಗಳನ್ನು ನಾಶಪಡಿಸುವ, ವಿದೇಶೀ ಬಂಡವಾಳಗಾರರಿಗೆ ಈ ನೆಲದ ನೈಸರ್ಗಿಕ-ಮಾನವ ಸಂಪನ್ಮೂಲಗಳನ್ನು ಕೊಳ್ಳೆಹೊಡೆಯಲು ಒತ್ತಾಸೆಯಾಗಿರುವ ಈ ಸೌಂದರ್ಯ ಸ್ಪರ್ಧೆಯನ್ನು ನಾವು ಮಹಿಳೆಯರು ಒಟ್ಟಾಗಿ ಪ್ರತಿಭಟಿಸುತ್ತೇವೆ. ಇದು ನಡೆಯದಂತೆ ಒತ್ತಾಯಿಸಲು ಇದೇ ತಿಂಗಳ ಮೂವತ್ತರಂದು ರ್‍ಯಾಲಿಯೊಂದನ್ನು ನಡೆಸುತ್ತಿದ್ದೇವೆ.

ರ್‍ಯಾಲಿಯ ಸಮಯ : ಮಧ್ಯಾಹ್ನ ಮೂರು ಘಂಟೆ

ಮಾರ್ಗ : ಟೌನ್‌ಹಾಲ್‌ನಿಂದ ವಿಧಾನ ಸೌಧ (ಕಬ್ಬನ್ ಪಾರ್ಕ್)

ಕಬ್ಬನ್ ಪಾರ್ಕ್‌ನಲ್ಲಿ ಸಭೆಯ ನಂತರ ಮುಖ್ಯಮಂತ್ರಿಗಳನ್ನು ಕಂಡು ಸ್ಪರ್ಧೆ ನಡೆಯದಂತೆ ಒತ್ತಾಯಿಸಿ ಮನವಿ ಸಲ್ಲಿಸಲಾಗುತ್ತದೆ. ಇದರ ಬಗ್ಗೆ ಕಳಕಳಿ ಇರುವ ಎಲ್ಲರೂ ರ್‍ಯಾಲಿಯಲ್ಲಿ ಭಾಗವಹಿಸಿ, ಸರ್ಕಾರದ ಮೇಲೆ ಒತ್ತಡ ತರುವ ಕೆಲಸದಲ್ಲಿ ಭಾಗಿಗಳಾಗಿರೆಂದು ಕೇಳಿಕೊಳ್ಳುತ್ತೇವೆ.

ಮಹಿಳಾ ಸಂಘರ್ಷ ಒಕ್ಕೂಟ

(ಮಾನಸ, ವಿಮೋಚನ, ಚಿಂತನ ಬಳಗ, ಮಾನಿನಿ, ಜನೋದಯ, ವಿಮೆನ್ಸ್ ವಾಯ್ಸ್, ಮಾಧ್ಯಮ್, ವಿಸ್ತಾರ್, ಮಹಿಳಾ ಜಾಗೃತಿ, ಸ್ತ್ರೀ ಜಾಗೃತಿ ಸಮಿತಿ, ಕರ್ನಾಟಕ ಬರಹಗಾರ್ತಿಯರ ಬಳಗ, ಮಹಿಳಾ ಪ್ರಗತಿ, WINA, AIPWA, JWP)

*(8ನೇ ಪುಟದಿಂದ ಮುಂದುವರಿದಿದೆ)*

ಮನೆ ಪಕ್ಕದ ಅಂಗಡಿಯಲ್ಲಿ ಉಗುರುಬಣ್ಣ, ಮುಖಲೇಪನ, ಚಿತ್ರವಿಚಿತ್ರ ಸ್ಟಿಕರ್‌ಗಳು, ಹೇರ್‌ಪಿನ್ನುಗಳು, ಸಿದ್ಧ ಉಡುಪುಗಳು ಸಿಕ್ಕುವಾಗ ಕೊಳ್ಳದಿರುವವರೇ ಮೂರ್ಖರು ಎಂಬ ಭಾವನೆಗೆ ನಮ್ಮನ್ನು ದಾಸರನ್ನಾಗಿಸುತ್ತವೆ. ಫ್ಯೂಡಲ್ ಸಮಾಜಗಳಲ್ಲಿನ ಹೆಜಮನಿಯಂತೆಯೇ ಇಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಹೆಜಮನಿ. ಒಂದು ಸಣ್ಣ ಉದಾಹರಣೆ. ರಾಯಚೂರಿನ ಒಬ್ಬ ಸ್ನೇಹಿತೆ. ದಲಿತರ ಹುಡುಗಿ. ಕಡು ಬಡತನದ ಕುಟುಂಬ. ಒಂದೇ ಕೋಣೆಯ ಅತಿ ಸಣ್ಣ ಮನೆಯಲ್ಲೇ ಕುಟುಂಬದ ಐದಾರು ಜನರ ವಾಸ. ಬಹುಪಾಲು ಗುಡಿಸಲಿನಂತದ್ದೇ ಮನೆ. ತಾಯಿ-ತಂದೆ ಕೂಲಿ ಮಾಡಿಕೊಂಡಿದ್ದಾರೆ. ಈಕೆ ಹತ್ತರವರೆಗೆ ಓದಿ ಸಣ್ಣ ಕೆಲಸದಲ್ಲಿದ್ದಾಳೆ. ಸಾವಿರ ಸಂಬಳ. ಇವಳು ದುಡಿಯುವ ಹಣದಲ್ಲಿ ಇವಳ ಬಟ್ಟೆ-ಬರೆ, ಮುಖ ಲೇಪನ, ಹೇರ್‌ಪಿನ್ನು, ತರಾವರಿಯ ರಬ್ಬರ್‌ಬ್ಯಾಂಡುಗಳು, ಹೇರ್ ಬ್ಯಾಂಡುಗಳು, ಬಳೆಗಳು, ಚಪ್ಪಲಿ ಇವಕ್ಕೆ ಕಡಿಮೆಯಿಲ್ಲದೆ ತಿಂಗಳ ಸಂಬಳದ 1/2 ಭಾಗ ಖರ್ಚು. ಇವುಗಳಲ್ಲಿ ಯಾವುದೊಂದು ಕೊರತೆಯಾದರೂ ಈಕೆ ಮನೆಯಿಂದ ಹೊರಗೆ ಕಾಲಿಡಲಾರಳು.

ಈ ಸೌಂದರ್ಯ ಸಾಧನಗಳು ಈಕೆಯಂತವರಲ್ಲಿ ಬೆಳೆಸುತ್ತಿರುವ ದಾಸ್ಯವನ್ನು ನೋಡಿದರೆ, ಇನ್ನೂ ನಾವು ಸಂಬಂಧವಿಲ್ಲದವರಂತೆ ಇರುವುದು ಸಾಧ್ಯವೇ ಎಂದೆನಿಸುತ್ತದೆ. ಹೆಂಗಸರಿಗೆ ತಮ್ಮ 'ಲುಕ್' ಬಗ್ಗೆ ಗೀಳು ಹಿಡಿಸಿ, ತಲೆ ಕೆಡಿಸಿ ತಮ್ಮ ದಾಸ್ಯಕ್ಕೆ ತಳ್ಳಿಕೊಳ್ಳುವ ಬಹುರಾಷ್ಟ್ರೀಯ ಕಂಪನಿಗಳ ಆಸಕ್ತಿಯ ಈ ಸೌಂದರ್ಯದ ಕಲ್ಪನೆ ಗ್ರಾಮೀಣ/ದಲಿತ ಹೆಣ್ಣು ಮಕ್ಕಳ ಮೇಲೆ ಅಮರಿಕೊಳ್ಳುತ್ತಿರುವ ಹೊಸಬಗೆಯ ದಾಸ್ಯದ ಬಲೆ ಎಂಬುದನ್ನು ನಾವು ಗಮನಿಸಬೇಕಾಗುತ್ತದೆ. ದೇಹದ ಮೇಲೆ ಗೀಳು [illegible]ಕೊಳ್ಳುತ್ತಿರುವ ಈಗಿನ ಜನಾಂಗದ ದಲಿತ ಹುಡುಗಿಯರಿಗೆ ಹಿಂದಿನ ಜನಾಂಗದ [illegible]ದಲ್ಲಿದ್ದ ದೇಹದ ಬಗೆಗಿನ ನಿರ್ಭಿಡೆ ನಾಶವಾಗುತ್ತದೆ.

ದಲಿತ ಮಹಿಳೆಯರ ಸ್ವಾಭಿಮಾನದ ಪ್ರಜ್ಞೆಯ [illegible]ವಿಕೆಯಿಂದ ದೇವದಾಸಿ, ಬೆತ್ತಲೆ ಸೇವೆಗಳಂತಹ ದಲಿತ ಹೆಂಗಸರಿಗೆ ಅವಹೇಳನಕಾರಿಯಾದ ಪದ್ಧತಿಗಳ ವಿರುದ್ಧ ದೃಢವಾದ ಪ್ರತಿಭಟನೆ ಮೂಡಿಬರುತ್ತಿರುವಾಗಲೇ, ಈ ಹೊತ್ತಿನ ಸೌಂದರ್ಯದ ಕಲ್ಪನೆ, ತನ್ನ ಕಮೊಡಿಫಿಕೇಶನ್‌ನ ಬಾಹುಗಳಿಗೆ ಅವರನ್ನು ಸೆಳೆದುಕೊಳ್ಳುತ್ತಿದೆ. ಮೀಸಲಾತಿಯಿಂದ ದಲಿತ/ಗ್ರಾಮೀಣ ಹುಡುಗಿಯರು ಶಾಲೆಯ ಮೆಟ್ಟಿಲು ತುಳಿಯುವಂತಾಗಿ, ಸಣ್ಣ ಕೆಲಸಗಳನ್ನು ಹಿಡಿಯಲು ಸಾಧ್ಯವಾಗುತ್ತಿರುವಾಗಲೇ, ಅವರನ್ನ ಮರಳು ಮಾಡಿ ಸೆಳೆಕೊಳ್ಳುವ ಈ ದಾಳಿ [illegible] ಕಾಣದಂತಿರುವ ಅಪಾಯಕ್ಕೆ ಒಳಗೊಳ್ಳಿಸುತ್ತಿದೆ.

ಯಾಕೆ? ಬರೀ ಮೇಲ್ಜಾತಿ/ವರ್ಗಗಳ ಹೆಂಗಸರೇ ಫ್ಯಾಷನ್ ಮಾಡಬೇಕಾ? ನಮ್ಮ ಹುಡುಗಿಯರೂ ಮಾಡಲಿ ಎಂದು ಅನೇಕರು ಸಿಟ್ಟಿನಿಂದ ಹೇಳುವುದು ಸಾಮಾನ್ಯ. ಆದರೆ ಕೇವಲ ಮಾರುಕಟ್ಟೆ ಆಸಕ್ತಿಯೆ ಮೂಲವಾಗಿರುವ ಈ ಶಕ್ತಿಗಳು, ತುಳಿತಕೊಳ್ಳಪಟ್ಟ ಜನಾಂಗಗಳು ಬಹುಕಾಲದ, ತೀವ್ರ ಹೋರಾಟದಿಂದ ಪಡಕೊಂಡ ವಿಮೋಚನೆಯ ಅಂಶಗಳನ್ನು ಉಪಯೋಗಿಸಿಕೊಂಡು ತಮ್ಮ ಲಾಭ ಸಾಧನೆ ಮಾಡುವುದರ ಬಗ್ಗೆ ಮಾತ್ರ ಎಚ್ಚೆತ್ತುಕೊಳ್ಳಬೇಕಾಗುತ್ತದೆ.

# ಮಾರುಕಟ್ಟೆ ಆಸಕ್ತಿಯ ವಿಶ್ವಸುಂದರಿ ಸ್ಪರ್ಧೆ

## (ಪ್ರಜಾವಾಣಿ ಪ್ರಕಟಿಸದೇ ಹೋದ ಮಾನಸದ ಪ್ರತಿಕ್ರಿಯೆಯನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ)

ದಿನಾಂಕ 11-9-96ರ 'ವಾಚಕರವಾಣಿ'ಯಲ್ಲಿ ಶ್ರೀಮತಿ ಕಮಲಾ ಹಂಪನಾ ಅವರು ಬೆಂಗಳೂರಿನಲ್ಲಿ ವಿಶ್ವಸುಂದರಿ ಸ್ಪರ್ಧೆಯನ್ನು ಸ್ವಾಗತಿಸುತ್ತಾ, ಇದು ದೇಶ-ದೇಶಗಳ ನಡುವಿನ ಸಾಂಸ್ಕೃತಿಕ ವಿನಿಮಯಕ್ಕೆ ಎಡೆಮಾಡಿಕೊಡುವ, ಸದಭಿರುಚಿಯ ಸಂಸ್ಕಾರದ ಉತ್ಸವವೆಂದು ಹೇಳಿದ್ದಾರೆ. ಇದು ಅಂಗಾಂಗ ಪ್ರದರ್ಶನದ ಕೀಳು ಅಭಿರುಚಿಯದ್ದಾಗಿರದೆ ಸಂಸ್ಕೃತಿಯ ಮಹತ್ವವನ್ನು ಅರಿತ ಪ್ರಜ್ಞಾವಂತ ತರುಣಿಯರು ಭಾಗವಹಿಸಿ ತಮ್ಮ-ತಮ್ಮ ಸಾಂಸ್ಕೃತಿಕ, ಧಾರ್ಮಿಕ ಹಿನ್ನೆಲೆ ಮತ್ತು ಶಿಕ್ಷಣಗಳನ್ನು ಮೆರೆಯುತ್ತಾರೆಂದು ಹೇಳಿದ್ದಾರೆ. ಈ ಸಾಂಸ್ಕೃತಿಕ ಹಿನ್ನೆಲೆಯ ಸ್ಪರ್ಧೆಯನ್ನು ಆದಾಯ-ನಷ್ಟದ ದೃಷ್ಟಿಯಿಂದ ನೋಡಬಾರದೆನ್ನುವುದು ಕೂಡ ಇವರ ಕಿವಿ ಮಾತು.

ಈ ಸ್ಪರ್ಧೆಗಳು ತಮ್ಮುಷ್ಟಕ್ಕೇ ಇವರೇಳುವಂತಾ ಸಾಂಸ್ಕೃತಿಕ ಉತ್ಸವಗಳಾಗಿದ್ದರೆ ಯೋಚನೆ ಯಿರುತ್ತಿರಲಿಲ್ಲವೇನೋ! ಆದರೆ ಕಮಲಾರಂತವರು ಗಮನಿಸಬೇಕಾಗಿರುವುದು, ಇಲ್ಲಿ ಅಡಗಿರುವ ವಿಶ್ವಮಾರುಕಟ್ಟೆಯನ್ನು ನಿಯಂತ್ರಿಸುತ್ತಿರುವ ಶಕ್ತಿಗಳ ಹಿತಾಸಕ್ತಿಯನ್ನು. ಈ ಶಕ್ತಿಗಳು ಮಾಡುತ್ತಿರುವುದಾದರೂ ಏನನ್ನು? ಮೊಟ್ಟ ಮೊದಲಿಗೆ, ಹೆಂಗಸಿನ ದೈಹಿಕ ಅಖಂಡತೆಯನ್ನು ನಾಶಪಡಿಸಿದ 'ಆದರ್ಶ ಸುಂದರಿ'ಯ ಕಲ್ಪನೆಯನ್ನು ಸೃಷ್ಟಿಸುವುದು; ಅದನ್ನು ಸಾಧಿಸಲೇಬೇಕೆನ್ನುವ ಭ್ರಮೆಯನ್ನು ಬೆಳೆಯುತ್ತಿರುವ ಮಧ್ಯಮ, ಕೆಳಮಧ್ಯಮ ವರ್ಗದ ತರುಣಿಯರಲ್ಲಿ ಹುಟ್ಟು ಹಾಕುವುದು; ಅದನ್ನು 'ಸುಲಭವಾಗಿ' ಸಾಧಿಸಲು ಬೇಕಾದ ಸಾಮಗ್ರಿಗಳನ್ನು ತೆಗೆದುಕೊಂಡು ಇಲ್ಲಿನ ಮಾರುಕಟ್ಟೆಯನ್ನು ಪ್ರವೇಶಿಸುವುದು, ಲಾಭ ದೋಚಿಕೊಳ್ಳುವುದು.

ಹೆಣ್ಣಿನ ಅಂಗ-ಅಂಗಗಳನ್ನು ಪ್ರತ್ಯೇಕವಾದ ಮಾನದಂಡದ ಪರೀಕ್ಷೆಗಳಿಗೆ ಒಡ್ಡಿ, ಇಂತಿಷ್ಟೇ ಗಾತ್ರದ, ಅಳತೆಯ, ಆಕಾರದ, ಸ್ವರೂಪದ ಅಂಗಾಂಗವುಳ್ಳ 'ಆದರ್ಶ ಸುಂದರಿ'ಯನ್ನು ತಯಾರಿಸಿ ನಮ್ಮ ಮುಂದಿಡಲಾಗುತ್ತದೆ. ಇಂತಹ ಹುಸಿ ಸೌಂದರ್ಯದ ಕಲ್ಪನೆ ಸೃಷ್ಟಿಸಿಕೊಟ್ಟ ಈ ಮಾಯಾ ಸುಂದರಿಗೆ ಮನಸೋತು ನಮ್ಮ ಹುಡುಗಿಯರು ಬಿಟ್ಟ ಕಣ್ಣು ಬಿಟ್ಟಂತಿರುವಾಗ, ನೋಡಿ, ನಿಮ್ಮ ಈ ಬಗೆಯ ಸೌಂದರ್ಯದ ಗುಟ್ಟು ಇಂತಿಂತಿಂತಿಂತಾ ಸೌಂದರ್ಯ ಸಾಧಕಗಳಲ್ಲಿ ಅಡಗಿದೆ ಎಂದು ಎಲ್ಲ ಸಾಧ್ಯವಿರುವ ಪ್ರಚಾರ ಮಾಧ್ಯಮಗಳ ಮೂಲಕ ಸಾರಲಾಗುತ್ತದೆ. ಹೀಗೆ ಬೀಸಿದ ಬಲೆಗೆ ಸಿಕ್ಕಿಕೊಂಡ ಮಧ್ಯಮ-ಕೆಳಮಧ್ಯಮ ವರ್ಗದ ತರುಣಿಯರಿಗೆ ಅವರ ಕೈಗೆಟುಕುವಂತಾ ರೀತಿಯಲ್ಲಿ ಸಣ್ಣ ಪ್ಯಾಕೆಟ್ಟುಗಳಲ್ಲಿ ಶಾಂಪೂಗಳನ್ನು, ಅಗ್ಗದ ನೈಲ್ ಪಾಲಿಶ್, ಮುಖಲೇಪನ, ಉಡುಪುಗಳನ್ನು ಸುಲಭವಾಗಿ ದೊರಕುವ ರೀತಿಯಲ್ಲಿ ಸಣ್ಣ ಊರುಗಳ, ಸಣ್ಣ ಸಣ್ಣ ಅಂಗಡಿಗಳಲ್ಲಿ ಲಭ್ಯವಾಗಿಸಲಾಗುತ್ತದೆ. ಹೀಗೆ ಮಧ್ಯಮ-ಕೆಳಮಧ್ಯಮ ವರ್ಗದ ಹೆಂಗಸರಲ್ಲಿ ಪ್ರತ್ಯೇಕ ಬಳಕೆದಾರರ ವರ್ಗವನ್ನೇ ಸೃಷ್ಟಿಸಿಕೊಂಡ ಈ ಬಹುರಾಷ್ಟ್ರೀಯ ಕಾಸ್ಮೆಟಿಕ್ ಕೈಗಾರಿಕೆಗಳು ಇದೀಗ ನಮ್ಮ ದೇಶದ ಮಾರುಕಟ್ಟೆಯಲ್ಲಿ ಅಪಾರ ಲಾಭ ಗಳಿಸುತ್ತಿವೆ. ಬೆಂಗಳೂರಿನ ವಿಶ್ವಸುಂದರೀ ಸ್ಪರ್ಧೆಯಿಂದಾಗಿ ಇದು ಇನ್ನೂ ಹೆಚ್ಚು ವಿಸ್ತಾರಗೊಳ್ಳುತ್ತದೆ. ಸೌಂದರ್ಯ ರಾಣಿಯ ಮಾಯಾಲೋಕದ ಸೆರೆಯಲ್ಲಿ ಸಿಕ್ಕಿ ಸೌಂದರ್ಯ ಸಾಧಕಗಳನ್ನು ಕೊಳ್ಳಲು ಹೆಣಗುವ ತರುಣಿಯರು ವಿಲಕ್ಷಣ ಚಟುವಟಿಕೆಗಳಿಗೆ ಪಕ್ಕಾಗುತ್ತಾರೆ. ಸುಶ್ಮಿತಸೆನ್, ಐಶ್ವರ್ಯ-ರೈಗಳ 'ಸಾಧನೆ'ಯ ನಂತರ ನಮ್ಮ ನಗರ-ಅರೆ ನಗರ ಪ್ರದೇಶಗಳಲ್ಲಿ ಕಾಲ್‌ಗರ್ಲ್ಸ್‌ಗಳ ಸಂಖ್ಯೆ ಗಮನಾರ್ಹವಾಗಿ ಹೆಚ್ಚಿರುವುದನ್ನು ಅವರೊಟ್ಟಿಗೆ ಕೆಲಸ ಮಾಡುವ ಸ್ನೇಹಿತೆಯರು ಗಮನಿಸಿದ್ದಾರೆ.

ಇನ್ನು ಸೌಂದರ್ಯ ರಾಣಿಯರ ತೀಕ್ಷ್ಣ ಬುದ್ಧಿ ಮತ್ತೆ, ಸಮಯಸ್ಫೂರ್ತಿಯಿಂದ ಉತ್ತರಿಸುವ ಅವರ 'ಭವ್ಯ' ಹಿನ್ನೆಲೆಯ ಬಗ್ಗೆ ಕಮಲಾ ಹೇಳುತ್ತಾರೆ. ಮಾರುಕಟ್ಟೆಯ, ಪಿತೃ ಪ್ರಧಾನ ಆಸಕ್ತಿಗಳಿಗೆ ಸರಿಯೊಪ್ಪುವಂತೆ ಹೇಗೆ ಉತ್ತರಿಸಬೇಕೆನ್ನುವ ಬಗ್ಗೆ ಅವರಿಗೆ ವರ್ಷಾನುಗಟ್ಟಲೆ ಕಟ್ಟುನಿಟ್ಟಿನ ತರಬೇತಿ ಕೊಡುತ್ತಿರುವಾಗ ಅವರ ಸ್ವಂತಿಕೆಗೆ ಇಲ್ಲಿ ಅವಕಾಶವಿರುವುದು ಹೇಗೆ ಸಾಧ್ಯ?

ಜತೆಗೆ, ಸಾಂಸ್ಕೃತಿಕ ವಿನಿಮಯದ ಬಗ್ಗೆ. ಕಮಲಾರಂತಹ ಜಾಗತೀಕರಣದ ಪ್ರತಿಪಾದಕರು ಹೇಳುವ ಮಾತೇ ಇದು. ವಾಸ್ತವವೆಂದರೆ, ಇಲ್ಲಿ ನಡೆಯುವುದು ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಸರಕುಗಳನ್ನು ಮಾರಾಟಕ್ಕೆ ಹುಟ್ಟು ಹಾಕುವ ಕನ್ಸೂಮರ್ ಸಂಸ್ಕೃತಿಯ ಹೇರಿಕೆಯೇ ಹೊರತು ಇವರೇಳುವಂತಹ ದೇಶ-ದೇಶಗಳ ನಡುವಿನ ನವಿರಾದ-ಸುಂದರ ಸಂಸ್ಕೃತಿಯ ವಿನಿಮಯವಲ್ಲ. ಹಾಗಿದ್ದರೆ ಇವರೇ ಪ್ರತಿಪಾದಿಸುವ ಭಾರತೀಯ ಸಂಸ್ಕೃತಿಯಲ್ಲಿ, ರಾಮಾಯಣದಲ್ಲಿ ಬರುವ ಆನೆಯ ಸೊಂಡಲಿನಂತಹ ತೊಡೆಯ, ದಪ್ಪ ನಿತಂಬದ ಆದರ್ಶ ಸುಂದರಿ ಸೀತೆಯಂತಹ ಯಾರೊಬ್ಬರೂ ಯಾಕೆ ವಿಶ್ವಸುಂದರಿಯಾಗಿ ಆಯ್ಕೆಯಾಗುತ್ತಿಲ್ಲ?

ಇನ್ನು, ಮಹಿಳಾ ಸಂಘಟನೆಗಳು ಆಗ ಪ್ರತಿಭಟಿಸಲಿಲ್ಲ, ಈಗ ಪ್ರತಿಭಟಿಸಲಿಲ್ಲ ಎಂಬ ಇವರ ಟೀಕೆಗೆ ಉತ್ತರವಾಗಿ-ಹೆಣ್ಣಿನ ದೈಹಿಕ ಅಖಂಡತೆಯನ್ನು ನಾಶಪಡಿಸಿ ಪದಾರ್ಥದ ಮಟ್ಟಕ್ಕಿಳಿಸುವ ಮತ್ತು ಪದಾರ್ಥಗಳ ಮಾರಾಟಕ್ಕೆ ಪ್ರವರ್ತಕರನ್ನಾಗಿ ಬಳಸುವ ಹಿತಾಸಕ್ತಿಗಳ ವಿರುದ್ಧ ಮಹಿಳಾ ಚಳುವಳಿ ಎಂದಿನಿಂದಲೂ ವ್ಯವಸ್ಥಿತ ಹೋರಾಟ ನಡೆಸುತ್ತಲೇ ಬಂದಿದೆ. ಹಾಗೆಯೇ, ಹೆಣ್ಣನ್ನು ಶೃಂಗಾರದ, ಆರಾಧನೆಯ, ಪರಿಶುದ್ಧತೆಯ ಹೆಸರಲ್ಲಿ ಭೋಗದ ವಸ್ತುವನ್ನಾಗಿಸಿರುವ, ದಾಸ್ಯಕ್ಕೊಳಪಡಿಸಿರುವ ಮತ್ತು ಸುಡುತ್ತಾ ಬಂದಿರುವ ಈ ನೆಲದ ಸಂಸ್ಕೃತಿಯ ವಿರುದ್ಧ ಕೂಡ.

●

## ವೇದ

ಊರ್ಧ್ವರೇತಸ್, ಊರ್ಧ್ವಮುಖಿ, ಊರ್ಧ್ವಗಾಮಿ
ವೇದಾತೀತ ಪುರುಷರ ಮೂಲ ಪ್ರತಿಮೆಯ
ಸುಂದರಿಯರ ಊರು
ಭಂಗಗೊಂಡ ಮಿಥುನಗಳಲ್ಲಿ ನರಳುತ್ತಿವೆ.

## ಪುರಾಣ

ಪುರಾಣಗಳ ಸೀತೆ ಸಾವಿತ್ರಿಯರು ಸೆರಗು ಹೊದ್ದು
ಗೌರಮ್ಮಗಳಾಗಿ ಮರೆಯಾದರು
ಈ ಸ್ಮಿತಾ ಸೇನ್ ಐಶ್ವರ್ಯರೈಗಳು ಸೆರಗು ಬಿಂದು
ಸುಪುಷ್ಟ ತೋಳು ತೊಡೆಗಳ ಗಿರಿಗಹ್ವರ
ಗಳಲ್ಲಿ ಕ್ಯಾಮೆರಾಗಳಲ್ಲಿ ಸೆರೆಯಾದರು

## ಅಕ್ಕ

ಅಕ್ಕಿದರೆ ಅಸ್ತಿಗಳು ನುಗ್ಗು ನುರಿಯಾಗಬೇಕು
ಎಚ್ಚರೆ ಗರಿಡೋರದಂತೆ ನೆಡಬೇಕು
ಎಂದು ಅಕ್ಕ ಹಾಡಿದ ಈ ನಾಡು

ಕನ್ನಡ ನಾಡು ಚೆನ್ನಮಲ್ಲಿಕಾರ್ಜುನರ ಬೀಡು
ನಿದ್ರಾಹಾರ ಮೈಥುನಗಳ ಅಂಗಭಂಗಿಯ ಸಂಗ
ಕವಲೊಡೆದ ಕನಸು

## ಬೇಂದ್ರೆ

ಪ್ರಣಯವೆಂದೆ ಓ ಪ್ರಣವ ಎಂದೆ
ಯ ವ ಮಾತ್ರ ಭೇದವಿಲ್ಲಾ
ಎಂದ ಅಂಬಿಕಾತನಯ ದತ್ತನಿಗೆ
ತೋಳು ತೊಡೆಗಳ ಅಂಗಾಂಗ ಶೋಭೆಯ ಕೊಡುಗೆ.

## ಎಬಿಸಿಎಲ್

ಸಿಡುಕಿನ ಯುವಕನೀಗ ಬಿಳಿ ಗಡ್ಡದ ಮುದುಕನಾಗಿ
ಹೆಂಡತಿ ಮಗಳ ಮನೆಯಲ್ಲಿ ಕೊಳೆ ಹಾಕಿ
ಬೆಂಗಳೂರೆಂಬ ಅಂಗಡಿಯಲ್ಲಿ ಮಾರಾಟಕ್ಕಿಟ್ಟಿದ್ದಾನೆ
ಅಂಗಾಂಗ ಭಂಗಿಗಳ ವಂದಾಗಿ ವಿದೇಶಗಳಿಗೆ.

- ಡಾ. ಎಸ್. ವಿ. ಪ್ರಭಾವತಿ

# "ಸೇವೆಗಾಗಿ ಸೌಂದರ್ಯ ಸ್ಪರ್ಧೆ"!




ಮೈಸೂರಿನಲ್ಲಿ ಸೌಂದರ್ಯ ಸ್ಪರ್ಧೆ ಶಾಂತ ವಾತಾವರಣದಲ್ಲಿ ನಡೆಯಿತು ಎಂಬ ಪತ್ರಿಕಾ ವರದಿಗಳನ್ನು ಬೇಸಿಗೆಯ ಬಿಸಿಲು ದಿನದಿನಕ್ಕೆ ಏರುತ್ತಿದ್ದರೂ ಕರ್ಣಾನಂದಕರವಾಗಿ ಮೈಮನಗಳಿಗೆ ತಂಪನ್ನೆರೆಯಿತು. ಸಾವಿರಾರು ಮಂದಿಗೆ ಸುಂದರಿಯರ ಸೌಂದರ್ಯವನ್ನು ಸವಿಯುವ ಅವಕಾಶವೊಂದು ಒದಗಿ ಪ್ರಾಪಂಚಿಕ ದುಃಖದುಮ್ಮಾನಗಳೇನೇ ಇದ್ದರೂ ಅವೆಲ್ಲವನ್ನು ಮರೆತು ತುರೀಯಾವಸ್ಥೆ ತಲುಪಿದ್ದುದು, ಇಡೀ ಭಾರತಕ್ಕೇ 'ಸುಂದರಿ'ಯಾದವಳನ್ನು ಕಂಡು ಹಿಗ್ಗಿಹೀರೇಕಾಯಾಗಿ ಸ್ವರ್ಗಕ್ಕೆ ಮೂರೇ ಗೇಮು ಇದ್ದಂತಾದುದು ತಿಳಿದು ಮರಣಾನಂದವಾಯಿತು. ಇಂಥ ಒಂದು ಸುವರ್ಣಾವಕಾಶವನ್ನು ಸಾರ್ವಜನಿಕರಿಂದ ಕಸಿಯಲು ಸಣ್ಣ ಗುಂಪೊಂದು ಪ್ರಯತ್ನಿಸಿದರೂ ಗಂಗೋತ್ರಿಯ ತಂಪು ವಾತಾವರಣದಿಂದ ಪ್ರತಿಭಟನೆಗೆ ಸಿದ್ಧವಾಗಿದ್ದ ಉಗ್ರ ಮನಸ್ಸುಗಳು ಫ್ರೀಜ್ ಆಗಿಯೋ, ಅಥವಾ ಸುಂದರಿಯರ ಸೌಂದರ್ಯದ ಮೋಡಿಗೊಳಗಾಗಿಯೋ ಕೆಲವೇ ನಿಮಿಷಗಳಲ್ಲಿ ಸದ್ದು ಗದ್ದಲವಿಲ್ಲದೆ ಚದುರಿತಂತೆ! ಹಾಗೆ ಚದುರಿದ ಗುಂಪಿನಿಂದ ಒಬ್ಬೊಬ್ಬರಾಗಿ ಬಯಲುರಂಗ ಮಂದಿರದೆಡೆಗೇ ಚದುರಿರಬಹುದೆಂಬುದು ಕೆಲವರ ಗುಮಾನಿ! ಏನೇ ಆಗಲಿ, ಸದ್ಯ, ಭಾರತ ಸುಂದರಿಯೊಬ್ಬಳ ಶೋಧ ಕಾರ್ಯ ಸುಸೂತ್ರವಾಗಿ ಜರುಗಿತೆಂದಷ್ಟೇ ಅಲ್ಲ, ಜೊತೆಗೆ ವ್ಯವಸ್ಥಾಪಕ ಸೇವಾಕಾರ್ಯವೂ ನಿರಾತಂಕವಾಗಿ ಮುಂದುವರೆಯುವಂತಾಯಿತಲ್ಲ ಎಂದು ಹಿರಿಹಿರಿ ಹಿಗ್ಗುವಂತಾಯಿತು. ಸುಂದರಿಯರು ಯಾರು ಯಾರು, ಎಷ್ಟೆಷ್ಟು ಎಂದು ಸಾರ್ವಜನಿಕರಿಗೆ ಜಾಹೀರುಗೊಳಿಸುವುದರೊಂದಿಗೆ ಇದುವರೆಗೆ ಜನತೆಯಲ್ಲಿ ಸುಪ್ತ (ಗುಪ್ತ)ವಾಗಿದ್ದ ಸೌಂದರ್ಯ ಪ್ರಜ್ಞೆಯನ್ನು ಜಾಗೃತಗೊಳಿಸಿದ ಕೀರ್ತಿ ಈ ವ್ಯವಸ್ಥಾಪಕರಿಗೆ ಸಲ್ಲಬೇಕು. ಸೇವೆಯೇ ಬದುಕಾದ (ಅದಿಲ್ಲದೆ ಅರೆನಿಮಿಷವೂ ಬದುಕಲಾರದ) ಈ ಮಂದಿ 'ಸೇವೆಗಾಗಿ ಸೌಂದರ್ಯ' ಎಂಬ ತಾತ್ವಿಕ ಮೌಲ್ಯವನ್ನು ಜನತೆಗೆ ಸಾರುವ ಮೂಲಕ ಜ್ಞಾನೋದಯ ಮಾಡಿದ್ದಲ್ಲದೆ 'ಮಿಸ್ ಕಾಸ್ಮಾಪಾಲಿಟನ್ ಇಂಡಿಯಾ 94' ಅನ್ನು ಏರ್ಪಡಿಸಿ ಜನತೆಗೆ ಮುಕ್ತಿಮಾರ್ಗವನ್ನು ತೋರಿದ್ದಾರೆ. ಅಲ್ಲದೆ ಮೈಸೂರಿನ ಮೆದುಳು-ಹೃದಯಗಳ ಸಂಗಮ ತಾಣವಾಗಿದ್ದ ಮಾನಸಗಂಗೋತ್ರಿಯ ಬಯಲು ರಂಗ ಮಂದಿರದಲ್ಲಿ ಭಾರತಮಟ್ಟದ ಸುಂದರಿಯರ ಸೌಂದರ್ಯವನ್ನು ಬಯಲು

ಮಾಡಿ ಭಾರತದ ಗೌರವವನ್ನು ಮುಗಿಲು ಮುಟ್ಟಿಸಿದ್ದಲ್ಲದೆ ಮೈಸೂರಿನ ಜನತೆಯ ಜೀವನವನ್ನು ಪಾವನಗೊಳಿಸಿದ್ದಾರೆ; ಗಂಗೋತ್ರಿಯ ಪ್ರತಿಷ್ಠೆಯನ್ನು ರಾಷ್ಟ್ರಮಟ್ಟಕ್ಕೇರಿಸಿದ (ಇನ್ನಾವುದರಿಂದಲೂ ಸಾಧ್ಯವಾಗದೆಂಬ ಅನುಮಾನ ಕಾಡಿ)ಸಾಧನೆ ಇವರದಾಗಿದೆ.

ಅತ್ಯಂತ ಬೇಸರದ ಸಂಗತಿಯೆಂದರೆ, ಇಂಥ ಮಹತ್ಕಾರ್ಯದ ವಿರುದ್ಧ ಎದ್ದ ಕೆಲವು ಅಪಸ್ವರಗಳು (ಈಗ ಸಂಪೂರ್ಣವಾಗಿ ಅಡಗಿಹೋಗಿದೆ ಬಿಡಿ) ಇವು 'ಪ್ಯೂರಿಟನ್ನು'ಗಳ ಹಾಗೂ 'ಫಂಡಮೆಂಟಲಿಸ್ಟ'ರ ಕರ್ಕಶ ಕಂಠಗಳಿಂದ ಹೊರಟ ಗೊಗ್ಗರು ದನಿಗಳು ಎನ್ನುವುದನ್ನು ಪತ್ರಿಕಾ ಸಂಪಾದಕರೊಬ್ಬರು ಡಿಸ್ಕವರ್ ಮಾಡಿಯೇಬಿಟ್ಟರು ಅನ್ನಿ. ಈ ಹಿಂದೆಯೂ ಇಂಥದೇ ಸ್ಪರ್ಧೆಯೊಂದು ಸರ್ಕಾರದ ವತಿಯಿಂದಲೇ ನಡೆಯಲಿದ್ದಾಗ ಇಂಥವೇ ನಾನ್‌ಪ್ರೊಗ್ರೆಸಿವ್ ದನಿಗಳು ಕ್ಷೀಣ ದನಿಗಳಾಗಿ ಹೊರಟು ಕೊನೆಗೆ ಅರಣ್ಯ ರೋಧನದಂತಾಗಿ ಇವುಗಳನ್ನು ಅಡಗಿಸುವುದು ಸೌಂದರ್ಯೋಪಾಸಕ ಸಂಕುಲಕ್ಕೆ ಕಷ್ಟವಾಗಲಿಲ್ಲ. ಈ ದನಿಗಳು ಮಹಿಳಾ ಗುಂಪೊಂದರ ಸದಸ್ಯೆಯರದೇ ಹೆಚ್ಚಾಗಿದ್ದು ಸ್ಪರ್ಧೆಗೆ ಅನ್‌ಕ್ವಾಲಿಫೈಡ್ ಆದ 'ಕುರೂಪಿ' ಮಹಿಳೆಯರದೇ ಎಂಬ ತೀರ್ಪನ್ನು 'ಸುಂದರಿ' ಎಂದು ಸಾರ್ವಜನಿಕರಿಂದ ಪಡೆದ ಸರ್ಟಿಫಿಕೇಟನ್ನು ಲಗತ್ತಿಸಿಕೊಂಡಿದ್ದ ಸುಂದರಿಯೊಬ್ಬರು ಪತ್ರಿಕೆಯೊಂದರ ಮೂಲಕ ನೀಡಿದ್ದರು! ಆದರೆ ಈ ಬಾರಿ ಇವು ಕ್ಷೀಣ ದನಿಗಳಾಗದೆ ಬೆದರಿಕೆಯ ದನಿಗಳಂತೆ (ಪುರುಷ ಧ್ವನಿಗಳೇ ಹೆಚ್ಚಾಗಿದ್ದುದರಿಂದ) ಕಂಡು ಬಂದು ಭಾರತದ ಸುಂದರಿಯರೆಲ್ಲ ಬೆದರಿದ ಹುಲ್ಲೆಗಳಂತಾದರೆ, ಇನ್ನೊಂದು ಕಡೆ ಸೇವೆಯೇ ಉಸಿರಾದ, ಈಗ ಲಕ್ಷಾಂತರ ಜನರಿಗೆ ಸೇ(ಶೇ)ವೆ ಮಾಡಹೊರಟಿದ್ದ ವ್ಯವಸ್ಥಾಪಕರಿಗೆ ಆಕಾಶವೇ ಕಳಚಿ ಬಿದ್ದ ಅನುಭವವಾಗಿತ್ತು. 'ಸೌಂದರ್ಯವನ್ನು ಸೇವೆಗಾಗಿಯೇ ಬಳಸಿಕೊಳ್ಳುತ್ತೇವೆ', ಮತ್ತೆ ಯಾವುದಕ್ಕೂ ಅಲ್ಲ!' ಎಂದು ಎಷ್ಟೆಷ್ಟೇ ಗ್ಯಾರಂಟಿ ಕೊಟ್ಟರೂ ಆ ಮಂದಿ ವಿರೋಧಿ ಕೂಗು ಹಾಕುತ್ತಾ ಗಂಟಲು ಕಟ್ಟಿದರೂ ನಿಲ್ಲಿಸದಿದ್ದುದನ್ನು ಕಂಡಾಗ ತಮ್ಮ ಮೇಲಿನ ಹೊಟ್ಟೆಕಿಚ್ಚಿಲ್ಲದೆ ಮತ್ತಿದು ಕಾರಣ ವಿರೋಧ ಸಾಧ್ಯ ಎಂಬ ಅನುಮಾನ ವ್ಯವಸ್ಥಾಪಕರನ್ನು ಕಾಡಿತ್ತು. ಇದರಲ್ಲಿ ಅವರ ತಪ್ಪೇನು? ಅವರೇನು ನಮ್ಮ ಮಡಿವಂತರಂತೆ ಹೆಣ್ಣಿನ ಸೌಂದರ್ಯವನ್ನು ತಾವೊಬ್ಬರೇ ಸವಿಯ ಹೊರಟಿದ್ದರೆ? ಸಾರ್ವಜನಿಕರೊಂದಿಗೆ ಹಂಚಿಕೊಳ್ಳುವ ಉದಾರ ಮನೋಭಾವವನ್ನು ಗುರುತಿಸದೆ ಹೊಟ್ಟೆಕಿಚ್ಚು ಪಡುವುದು ಸಣ್ಣತನವಲ್ಲದೆ ಮತ್ತೇನು?

ಇವರ ಹಿನ್ನೆಲೆಯನ್ನು ಚೆನ್ನಾಗಿಯೇ ಅರಿತಿದ್ದೂ, 'ಸೇವೆಗಾಗಿ ಸೌಂದರ್ಯದ ವಿರುದ್ಧ ದನಿ ಎತ್ತಿದ್ದ ಕೆಲವು ಹಿರಿಯ ಸಾಹಿತಿಗಳ ಗುಪ್ತ ಉದ್ದೇಶಗಳ ಬಗ್ಗೆ ಹಲವರಿಗೆ ಅನುಮಾನ ಬಂದುದೂ ಸಹಜವೇ. ಈ ಹಿಂದೆ ಇಂಥ ಹಲವಾರು ಕಾರ್ಯಕ್ರಮಗಳು ತಮ್ಮ ಕಣ್ಣ ಮುಂದೆಯೇ ನಡೆಯುತ್ತಿದ್ದರೂ ಕೆಲವೊಮ್ಮೆ ಮಡಿವಂತರಂತೆ, ಮತ್ತೆ ಕೆಲವೊಮ್ಮೆ ವಿಚಾರವಂತರಂತೆ ಕಾಣುವ ಇವರಾರೂ ಬಾಯಿಬಿಟ್ಟವರಲ್ಲ. ಮೊದಲೆಲ್ಲ ಎಂತೆಂಥವುಗಳಿಗೆಲ್ಲ ಪ್ರಸಿದ್ಧವಾಗಿದ್ದರೂ ಸೌಂದರ್ಯವನ್ನು ಇಷ್ಟು ಬಿಡುಬೀಸಾಗಿ (ಏನಿದ್ದರೂ ಕಣ್ಣಿನಲ್ಲೇ ಮಾತಿನಲ್ಲೇ, ಕೃತಿಯಲ್ಲೇ ಅಳೆಯುತ್ತಿದ್ದುದು ನಿಜವಾದರೂ) ಅಳೆದು ಹೆಸರು ಮಾಡದಿದ್ದ ಗಂಗೋತ್ರಿ ಈಗ ಸೇವಾ ಧುರೀಣರ ಕೃಪಾದೃಷ್ಟಿಗೊಳಗಾಗಿ ಜಗತ್ಪ್ರಸಿದ್ಧವಾಗಲಿದ್ದಾಗ, ಇಲ್ಲಿಯ ವಿದ್ಯಾರ್ಥಿ ಸಂಕುಲ ಸುಂದರಿಯರನ್ನು, ಅದರಲ್ಲೂ ಇಡೀ ದೇಶದಲ್ಲೇ ಸುಂದರಿಯಾದವಳನ್ನು ಕಾಣಲು ಅತ್ಯುತ್ಸಾಹದಿಂದ ಸಕಲ ಸಿದ್ಧತೆಗಳೊಂದಿಗೆ ಕಣ್ಣಿಗೆ ಎಣ್ಣೆ ಹಾಕಿಕೊಂಡು ಚಾತಕ ಪಕ್ಷಿಗಳಂತೆ, ಶಬರಿಯಂತೆ ಕಾಯುತ್ತಾ ಕುಳಿತಿದ್ದಾಗ ಬಾಯಿಬಿಟ್ಟು ಬಣ್ಣಗೇಡು ಮಾಡಿಕೊಂಡ ಇಂಥವರ ಅಪಸ್ವರ ಕೇಳಿದವರಿಗೆ ಸಿಟ್ಟು ಬಾರದೆ ಮತ್ತೇನು? ಇಂಥ ಧನಿಯ ಹಿನ್ನೆಲೆ ಏನು? ಜೆಲೆಸಿ? ಮೇಲ್ ಚಾವಿನಿಸಂ? ಹೆಣ್ಣನ್ನು ಸುಂದರ ವಸ್ತುವೆಂದೇ ಪರಿಗಣಿಸಿ ಅವಳ ಮೇಲೆ ಅಧಿಕಾರ ಮುದ್ರೆಯೊತ್ತಲು ಪರಸ್ಪರ ಕಚ್ಚಾಡಿ, ಬಡಿದಾಡಿದ ರಾಜಮಹಾರಾಜರ ಭವ್ಯ ಪರಂಪರೆಯುಳ್ಳ, ಭಾರತದಂಥ ಬಡದೇಶದಲ್ಲಿ ಪೈಸೆ ಖರ್ಚಿಲ್ಲದೆ ಮಾಡಬಹುದಾದ ಕೆಲಸಕ್ಕೆ ಲಕ್ಷಗಟ್ಟಲೆ ಖರ್ಚು ಮಾಡಿ ಸಾಧಿಸುವುದೇನು ಎಂಬ ಉಡಾಫೆ... ರಬಹುದೆ?

ಇಂಥ ಅಭಿಪ್ರಾಯಗಳಿಗೆ ಧಾರ್ಮಿಕ ಬಣ್ಣ ಕೊಟ್ಟು ವಾದಿಸುವವರನ್ನೇ ನೋಡಿ. ಭಾರತದಲ್ಲಿ ಒಂದೇ ಧರ್ಮದವರಿಲ್ಲದೆ ಹಲವಾರು ಧರ್ಮೀಯರು ಶತಮಾನಗಳಿಂದ ನೆಲೆಯೂರಿರುವಾಗ ಯಾವುದೇ ಒಂದು ಧರ್ಮೀಯರ ವಾದವನ್ನು ಒಪ್ಪಿಕೊಳ್ಳುವ ತಪ್ಪು ಮಾಡಿದರೆ ಈ ರಾಷ್ಟ್ರದ ಸೆಕ್ಯುಲರಿಸಂನ ಗತಿ ಏನು? ಶತಶತಮಾನಗಳಿಂದಲೂ ಹೆಣ್ಣು ಮಕ್ಕಳನ್ನು ರಂಬೆ, ಊರ್ವಶಿ, ಮೇನಕೆ, ತಿಲೋತ್ತಮೆ ಮುಂತಾದ ವಾರಾಂಗನೆಯರಿಗೆ (ಕಾಲ್ಪನಿಕ ವ್ಯಕ್ತಿಗಳಾಗಿದ್ದಿರಬಹುದು) ಹೋಲಿಸುತ್ತಾ ಬಂದಿರುವಾಗ, ಶಿಲ್ಪಗಳಲ್ಲಿ, ಕಾವ್ಯಗಳಲ್ಲಿ ಹೆಣ್ಣಿನ ಸೌಂದರ್ಯವನ್ನು ಬಗೆಬಗೆಯಾಗಿ, ಬಿಡಿಬಿಡಿಯಾಗಿ ಬಣ್ಣಿಸುತ್ತಾ,

ಅರೆಬೆತ್ತಲೆಯಾಗಿ ಚಿತ್ರಿಸುತ್ತಾ ಬಂದ ಪುರುಷ ಸಿಂಹರು ಅದರ ವಿರುದ್ಧ ಕಮಕ್ ಕಿಮಕ್ ಎನ್ನದೆ ಇನ್ನೂ ರಸವತ್ತಾಗಿ ವೇದಿಕೆ/ ತರಗತಿಗಳಲ್ಲಿ ಬಣ್ಣಿಸುವ ಪಂಡಿತರು ಧರ್ಮವನ್ನೇ ಮುಂದಿಟ್ಟುಕೊಂಡು ಇಂಥ ಸ್ಪರ್ಧೆಗಳನ್ನು ಖಂಡಿಸುವುದು ಎಷ್ಟರಮಟ್ಟಿಗೆ ಸಮರ್ಥನೀಯ? ಇಂಥ ನೈತಿಕತೆ ಫಂಡಮೆಂಟಲಿಸ್ಟರಿಗೆ ಬಂದುದಾದರೂ ಎಲ್ಲಿಂದ ಎಂದು ಕೇಳಿದ್ದರಲ್ಲಿ ತಪ್ಪೇನಿದೆ? ಈ ಧರ್ಮಗಳೆಲ್ಲಾ ಹೊಟ್ಟೆಕಿಚ್ಚಿನಿಂದ ಹೆಣ್ಣನ್ನು ಮನೆಗೆ ಬಂಧಿಸಿಟ್ಟಿದ್ದರಿಂದಲೇ ಅಲ್ಲವೆ ಸೌಂದರ್ಯವನ್ನು ಕದ್ದುಮುಚ್ಚಿ ಸವಿಯುವಂತಾದದ್ದು? ಅದಕ್ಕೇ ಅಲ್ಲವೆ ಅವರು ಹಿಂದುಳಿದವರೆಂಬ ಹಣೆಪಟ್ಟಿ ಕಟ್ಟಿಕೊಳ್ಳುವಂತಾದದ್ದು? ಇದರ ಅರಿವಿಲ್ಲದೆ ಅವರು ಕೂಗಾಡುವುದು ಎಷ್ಟು ಸರಿ?

ಹೋಗಲಿ, ಮಹಿಳಾ ಚಳುವಳಿಕಾರರೆಂಬ ಹಣೆಪಟ್ಟಿಯ ಹೆಂಗಳೆಯರಾದರೂ ಸರಿದಿಕ್ಕಿನಲ್ಲಿ ವಾದಿಸುತ್ತಿದ್ದಾರೆಯೇ ಎಂದರೆ ಅದೂ ಇಲ್ಲ. 'ಸಮಾನತೆ, ಸಮಾನತೆ' ಎನ್ನುತ್ತಾ ತಮ್ಮ ವೈಯಕ್ತಿಕ ಬದುಕಿನಲ್ಲಿ ಹೋರಾಡುವ, ಸಾರ್ವಜನಿಕ ವೇದಿಕೆಗಳಲ್ಲಿ ಮೈಚಳಿಬಿಟ್ಟು ಮಾತನಾಡಿ, ಪುರುಷರ ಮೈ ಬಿಸಿಯೇರಿಸುವ ಕೆಲವು 'ಕುರೂಪಿ' ಮಹಿಳೆಯರು, ತಮ್ಮ ಮೈಚಳಿ ಬಿಟ್ಟು ಸೌಂದರ್ಯ ಪ್ರದರ್ಶನಕ್ಕೆ ಮುಂದಾಗುವವರ ಧೈರ್ಯ-ಸಾಹಸಗಳನ್ನು ಮೆಚ್ಚುವ ಬದಲು, ಇಂಥ ಅವಕಾಶಗಳನ್ನು ಸೃಷ್ಟಿಸುವ ವ್ಯವಸ್ಥಾಪಕರಿಗೆ ಕೃತಜ್ಞರಾಗಿರುವ ಬದಲು, ಹೊಟ್ಟೆಕಿಚ್ಚಿನಿಂದಲೋ, ಅಸಹಾಯಕತೆಯಿಂದಲೋ ಚಳಿ ಜ್ವರ ಬಂದವರಂತೆ ಆಡುವುದಾದರೂ ಏಕೆನ್ನುವುದು ಸೌಂದರ್ಯ ಪ್ರದರ್ಶನಪ್ರಿಯರು ಹಾಗೂ ಸೌಂದರ್ಯೋಪಸಾಕರಿಗೂ ಬಿಡಿಸಲಾಗದ ಕಗ್ಗಂಟಾಗಿಯೇ ಉಳಿದಿದೆ.

ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸುವವರ ವಿರುದ್ಧ ಇಷ್ಟೆಲ್ಲಾ ಬರೆದ ಮೇಲೆ ಅದರಿಂದ ಹೆಣ್ಣು ಮಕ್ಕಳಿಗಾಗುವ ಪ್ರಯೋಜನವೇನು ಎನ್ನುವ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಈಗ ನೋಡಿ, 'ಹಿತ್ತಲ ಗಿಡ ಮದ್ದಲ್ಲ' ಎಂಬಂತೆ ನಮ್ಮ ಹೆಣ್ಣು ಮಕ್ಕಳು ಸುಂದರಿಯರಲ್ಲ ಎಂಬ ಇದುವರೆಗಿನ ಕೀಳರಿಮೆಯನ್ನು ನಮ್ಮ ಹೆಣ್ಣು ಮಕ್ಕಳು ಸುಂದರಿಯರೆಂದು ಸಾಬೀತುಗೊಳಿಸುವ ಅವಕಾಶ ಒದಗಿರುವುದರಿಂದ ದೂರ ಮಾಡಬಹುದು. ಒಂದು ವೇಳೆ ಸ್ಪರ್ಧೆಯಲ್ಲಿ ಗೆಲ್ಲದಿದ್ದರೂ ಸ್ಪರ್ಧೆಯಲ್ಲಿ ಪ್ರವೇಶ ಪಡೆಯುತ್ತಾರೆಂದಮೇಲೆ ಅವರು ಅಷ್ಟರಮಟ್ಟಿಗೆ ಸುಂದರಿಯರು, ಆತ್ಮವಿಶ್ವಾಸವುಳ್ಳವರು ಎಂಬ ಗುಮಾನಿಯಾದರೂ ಉಂಟಾಗುತ್ತದಲ್ಲ! ಗೆಲ್ಲದವರು ಬೇಸರಿಸುವ ಸಂಗತಿಯೇನಿರುವುದಿಲ್ಲ. ಗೆದ್ದವರನ್ನು ನೋಡಿರುತ್ತಾರಾದ್ದರಿಂದ ಅವರಂತೆಯೇ ನಡೆ-ನುಡಿ, ವೇಷ ಭೂಷಣಗಳನ್ನು ಅನುಕರಿಸುತ್ತಾ ಹೋಗುತ್ತಾ ಹೋಗುತ್ತಾ ಮುಂದೊಂದು ದಿನ ಗೆಲ್ಲುವ ಕನಸು ಕಾಣಬಹುದಾಗಿದೆ. ಸ್ಪರ್ಧಿಸಲು ಹಿಂದೇಟು ಹೊಡೆಯುವವರು ನಮ್ಮಲ್ಲಿ ಇಲ್ಲದೆ ಇಲ್ಲ. ಅಂಥವರೂ ಕೂಡ ಗೆದ್ದವರ ಅನುಕರಣೆ ಮಾಡುವ ಮೂಲಕ ತಮ್ಮ ಬಗೆಗಿನ ಕೀಳರಿಮೆಯಿಂದ ಪಾರಾಗಬಹುದು! ಇಂಥ ಅನುಕರಣೆ ಹೆಚ್ಚುತ್ತಾ ಹೋದಂತೆ ನಮ್ಮ ಹೆಣ್ಣು ಮಕ್ಕಳೆಲ್ಲಾ 'ಮಿಸ್ ವರ್ಲ್ಡ್', 'ಮಿಸ್ ಇಂಡಿಯಾ', 'ಮಿಸ್ ಕರ್ನಾಟಕ' ಮಿಸ್. ಗಂಗೋತ್ರಿ, ಮಿಸ್...... ಮಿಸ್....... ಮುಂತಾಗಿ ಕಾಣತೊಡಗಿ ಟಿ.ವಿ., ಚಲನಚಿತ್ರ ಮಾಧ್ಯಮಗಳಲ್ಲಿನ, ಹೊರ ರಾಜ್ಯದ, ಹೊರ ದೇಶದ ಹೆಂಗಳೆಯರ ಸೌಂದರ್ಯಾರಾಧನೆಯ ಪರಿಪಾಠ ನಮ್ಮ ಪುರುಷರಲ್ಲಿ ಕಡಿಮೆಯಾಗಬಹುದು! ಇದರಿಂದಾಗಿ ಇಲ್ಲಿನ ಹೆಣ್ಣು ಮಕ್ಕಳೆಲ್ಲಾ ನೆಮ್ಮದಿಯಿಂದ, ಆತ್ಮವಿಶ್ವಾಸದಿಂದ, ಹೆಮ್ಮೆಯಿಂದ ಬೀಗುತ್ತಾ ಸ್ವಸೌಂದರ್ಯಾರಾಧನೆಯಲ್ಲಿ ತನ್ಮಯರಾಗಿರಬಹುದು. ಸೌಂದರ್ಯ ಪ್ರದರ್ಶನ ಕಲೆಯಲ್ಲಿ ಪರಿಣತಿ ಪಡೆದಂತೆಲ್ಲಾ ತಮ್ಮ ಪ್ರೇಮಿಗಳನ್ನು/ಗಂಡಂದಿರನ್ನು ತಮ್ಮ ಕಿರುಬೆರಳಿನಲ್ಲಿ ಆಡಿಸುವ ಛಾತಿ ಅವರದಾಗಬಹುದು!

ಇಂಥ ಸ್ಪರ್ಧೆಗಳಲ್ಲಿ, ಪ್ರದರ್ಶನಗಳಲ್ಲಿ ಎಲ್.ಕೆ.ಜಿ. ಮಕ್ಕಳಿಗೂ ಪ್ರವೇಶ ಇರುವುದಾದಲ್ಲಿ, ಅಥವಾ ವಿವಿಧ ವಯೋಗುಂಪಿಗೆ ಇಂಥ ಸ್ಪರ್ಧೆಗಳು ನಡೆದುದೇ (ಈಗಾಗಲೇ ಮೈಸೂರಿನಲ್ಲಿ 'ಮಿಸ್ ಎಲ್.ಕೆ.ಜಿ.'ಗಳನ್ನು ಗುರುತಿಸಲಾಗುತ್ತಿದೆಯಾದರೂ ವ್ಯಾಪಕವಾಗಿಲ್ಲ) ಆದಲ್ಲಿ ಎಳೆ ವಯಸ್ಸಿನಲ್ಲೇ ತಮ್ಮ ಸೌಂದರ್ಯದ ಬಗ್ಗೆ ಕಾಳಜಿ ಮೂಡುವುದು ಮಾತ್ರವಲ್ಲ, ಅದನ್ನು ಬಯಲು ಮಾಡುವ ಕಲೆಯನ್ನು ಕರಗತಮಾಡಿಕೊಳ್ಳಲು ಅಗತ್ಯ ತರಬೇತಿ ದೊರಕಿ ಮುಂದೊಂದು ದಿನ 'ಮಿಸ್ ಇಂಡಿಯಾ' 'ಮಿಸ್ ವರ್ಲ್ಡ್'ಗಳಾಗಲು ಅರ್ಹತೆ ಪಡೆಯಬಹುದು. ಅಲ್ಲದೆ ಸ್ಪರ್ಧಿಸುವವರ ಸಂಖ್ಯೆ ಹೆಚ್ಚುತ್ತಾ ಹೋಗಿ 'ನಿಜವಾದ' ಸುಂದರಿಯರನ್ನು ಗುರುತಿಸಲು ಸಾಧ್ಯವಾಗಬಹುದು. ಈಗ 'ಮಿಸ್ ಇಂಡಿಯಾ', 'ಮಿಸ್ ವರ್ಲ್ಡ್'ಗಳನ್ನು ನೋಡಿ ಕಣ್ಣು ಮುಚ್ಚಿಕೊಳ್ಳುವಂತಾಗುತ್ತದೆ ಎಂಬ 'ಗೂಸಲು'ಗಳ ಗೊಣಗಾಟ ನಿಂತು ಕಣ್ಣು-ಬಾಯಿ ಬಿಟ್ಟದ್ದು ಬಿಟ್ಟಂತೆಯೇ ಇರುವಂಥ ಸುಂದರಿಯರ 'ಶೋಧ' ಸಾಧ್ಯವಾಗಬಹುದು. ಇದನ್ನೆಲ್ಲಾ ಗಮನಿಸಿ ಸರಕಾರ ಸೌಂದರ್ಯ ಸ್ಪರ್ಧೆಗಳನ್ನು ಶಾಲಾ ಕಾಲೇಜುಗಳಲ್ಲಿ ಕಡ್ಡಾಯಗೊಳಿಸಬೇಕು. ಇದಕ್ಕೆ ಹಣಕಾಸಿನ

ತೊಂದರೆ ಮುಂದಿಟ್ಟು ಕೆಲವು ಸಂಸ್ಥೆಗಳು ನಡೆಸದೆ ಇರಬಹುದಾದ (ಮಡಿವಂತರೂ ಇರುವ) ಸಾಧ್ಯತೆಗಳಿರುವುದರಿಂದ ಅದಕ್ಕಾಗಿ ಸಹಾಯ ಧನ ನೀಡುವ ಯೋಜನೆ ಜಾರಿಗೆ ತರುವುದು ಲೇಸು!

ಇಲ್ಲಿ ಇನ್ನೊಂದು ಸಮಸ್ಯೆ ಉದ್ಭವಿಸಬಹುದು! ಸರಕಾರದ ಸಹಾಯಧನವಿಲ್ಲದೆ 'ಸೇವೆಗಾಗಿ' ಸೌಂದರ್ಯ ಸ್ಪರ್ಧೆಗಳನ್ನು ಏರ್ಪಡಿಸುವಾಗ ವೀಕ್ಷಕರ ಸಂಖ್ಯೆ ಸ್ಪರ್ಧಿಸುವವರ ಸಂಖ್ಯೆಯಷ್ಟೇ ಮುಖ್ಯವಾಗುತ್ತದೆ. ಇಂಥ ಸ್ಪರ್ಧೆಗಳಿಗೆ ಚಿಕ್ಕ ವಯಸ್ಸಿನಿಂದಲೇ ತರಬೇತಿ ಪಡೆದವರು ಸ್ಪರ್ಧಿಸಲು ಮುಂದಾಗುತ್ತಾರಾದ್ದರಿಂದ ಸ್ಪರ್ಧಿಗಳ ಸಂಖ್ಯೆಗೆ ಮಿತಿಯನ್ನು ಹಾಕಿಕೊಳ್ಳಬೇಕಾಗುತ್ತದೆ. ಉಳಿದವರನ್ನು ವೀಕ್ಷಕರಾಗುವಂತೆ ಕ್ರಮ ಕೈಗೊಳ್ಳಬೇಕಾಗುತ್ತದೆ. ಈ ಸ್ಪರ್ಧಾ ಸಂಖ್ಯೆಯ ಮಿತಿಯಿಂದಾಗಿ ತಮ್ಮ ಹಣ, ಪ್ರಭಾವ, ಹಿನ್ನೆಲೆ ಮತ್ತಿತರ ವಿಧಾನಗಳನ್ನು ಬಳಸಿಕೊಂಡು ಪ್ರವೇಶ ಗಿಟ್ಟಿಸುವ ಪ್ರಸಂಗಗಳೂ ಎದುರಾಗಬಹುದು. ಆದರೆ ಇದಾವುದೂ ಇಲ್ಲದ ಸುಂದರಿಯರು ಸ್ಪರ್ಧಿಸುವ ಅವಕಾಶಗಳಿಂದ ವಂಚಿತರಾಗುತ್ತಾರೆ. ಇಂಥವರು ಮತ್ತೆ ಇತಿಹಾಸದಲ್ಲಿ ವಂಚಿತರಾದ ಗುಂಪಿಗೇ ಸೇರಿದವರಾಗಿರುತ್ತಾರೆ. ಹೀಗಾಗದಂತೆ ಜಾತಿ+ ಸೌಂದರ್ಯಾಧಾರಿತ ಮೀಸಲಾತಿಯ ನಿಯಮಗಳನ್ನು ರೂಪಿಸಿ ಅಳವಡಿಸುವತ್ತ ಸರಕಾರ ಚಿಂತಿಸಬೇಕಾಗಬಹುದು. ಹಾಗೇ ಸುಂದರರಾದ ತಾಯಿ-ತಂದೆಗಳನ್ನು ಹೊಂದಿರುವ ಮಕ್ಕಳು ಸುಂದರರಾಗಿರುವುದು ಸಹಜವೆನ್ನಬಹುದಾದ್ದರಿಂದ, ಅಂಥ ತಂದೆ ತಾಯಿಗಳನ್ನು ಹೊಂದಿಲ್ಲದಿದ್ದರೂ ಕೆಲವೊಮ್ಮೆ ಸುಂದರರಾಗಿರುವವರಿಗೆ ಗ್ರೇಸ್‌ಮಾರ್ಕ್ಸ್ ಕೊಡುವಂತೆ ನೋಡಿಕೊಳ್ಳಬೇಕು! ಇದರಿಂದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿರುವ ನಾವು ಇಲ್ಲಿಯೂ ಸಮಾನತಾ ತತ್ವವನ್ನು ಅಳವಡಿಸಿದಂತಾಗುತ್ತದೆ!

ಹೀಗೆ ಸ್ಪರ್ಧಿಸಿ ಗೆದ್ದಂಥ ಸುಂದರಿಯರಿಗೆ ಕ್ಲಬ್, ಮಾಡೆಲಿಂಗ್ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಉದ್ಯೋಗಗಳು ಸಿಗುವಂತೆ ಮೀಸಲಾತಿ ಸೌಲಭ್ಯಗಳನ್ನು ವಿಸ್ತರಿಸಬಹುದಾಗಿದೆ. ಇದರಿಂದ ಕಛೇರಿಗಳಲ್ಲಿ ಸೌಂದರ್ಯದ ಕಂಪು ಹರಡಿ ಅಲ್ಲಿಯ ವಾತಾವರಣವೇ ಬದಲಾಗಿ ಈಗ ಸರಕಾರಿ ಕಛೇರಿಗಳೆಂದರೆ ಮೂಗು ಮುರಿಯುವ ಸಾರ್ವಜನಿಕರನ್ನು ಹೆಚ್ಚು ಹೆಚ್ಚು ಆಕರ್ಷಿಸಿ, ಕೆಲಸವಿರಲಿ ಇಲ್ಲದಿರಲಿ ಕಛೇರಿಗಳಿಗೆ ತಾಕಲಾಡುವಂತಾದರೂ (ಈಗಲೂ ಅಷ್ಟೆ) ಬೇಸರಿಸದೆ ಬಾಯಿ ಮುಚ್ಚಿಕೊಂಡಿರುವಂತೆ ಮಾಡಬಹುದು. ಕಛೇರಿಗಳಲ್ಲಿ ಸುಂದರಿಯರ ಅಸ್ತಿತ್ವವೇ ಪುರುಷ ಉದ್ಯೋಗಿಗಳಿಗೆ ಸ್ಫೂರ್ತಿಯ ಸೆಲೆಯಾಗಿ, ಈಗ ಹಲವಾರು ಕಾರಣಗಳೊಡ್ಡಿ (ಬಸ್ಸು, ಮನೆ ತಾಪತ್ರಯ, ಅನಾರೋಗ್ಯ, ಕಾಫಿ/ಟೀ, ಸಿಗರೇಟು ಮುಂತಾದವು) ಕಛೇರಿಯ ಕುರ್ಚಿಗಳಿಂದ ಮಂಗಮಾಯವಾಗುವ, ಬೆಳಿಗ್ಗೆ ತಡವಾಗಿ ಹಾಜರಾಗಿ, ಸಂಜೆ ಬೇಗನೆ ಜಾಗ ಖಾಲಿ ಮಾಡುವ ನೌಕರರು ಬೆಳಿಗ್ಗೆ ಹತ್ತು ಗಂಟೆಗೆ ಏಕೆ ಏಳು ಗಂಟೆಗೇ ಬರಲು ಹೇಳಿದರೂ (ಈಗ ನೋಟೀಸು ಜಾರಿ ಮಾಡಿದರೂ ಬರದೆ ಇರುವವರು) ತಪ್ಪದೆ ಐದು ನಿಮಿಷ ಮೊದಲೇ ಹಾಜರಾಗುವ, ಎಷ್ಟೇ ಫೈಲುಗಳನ್ನು ಕೊಟ್ಟರೂ ಮುಖದಲ್ಲಿ ಸ್ವಲ್ಪವೂ ಬೇಸರ ತೋರದೆ ಅವುಗಳ ಮುಂದೆ ಕುಳಿತು ರಾತ್ರಿ ಹೊಟ್ಟೆ ತಾಳ ಹಾಕಿದಾಗಲೆ ಮನೆಯ ನೆನಪಾಗಿ ಕಛೇರಿ ಬಿಡುವ ನೌಕರರನ್ನು ಸೃಷ್ಟಿ ಮಾಡಬಹುದು! ಇಷ್ಟೇ ಅಲ್ಲ. ಈಗ ಉದ್ಯೋಗಸ್ಥ ಮಹಿಳೆಯರಿಗೆ ಕಛೇರಿಗಳಲ್ಲಿ ಸಹೋದ್ಯೋಗಿಗಳ/ಅಧಿಕಾರಿಗಳ ಕಿರುಕುಳವೇ ಮೊದಲಾದ ದೂರುಗಳು ಅಲ್ಲಲ್ಲಿ ಸುದ್ದಿಯಾಗುತ್ತಿರುವುದನ್ನು ಗಮನಿಸಿದಾಗ ಅಂಥ ಒಂದು ಸಮಸ್ಯೆಯ ನಿವಾರಣೆ ಇಂಥ ಒಂದು ಸಣ್ಣ ಕ್ರಮದಿಂದಾಗಿ ಸಾಧ್ಯವಾಗಬಹುದು. 'ಸುಂದರಿಯರಾದವರಿಗೆ ಸಹಜವಾಗಿ ಸಹೋದ್ಯೋಗಿ/ಮತ್ತಿತರರ ಕಿರುಕುಳ' ಇರುವುದಿಲ್ಲವಾದರೂ ಹಾಗೆ ಯಾವಾಗಲೂ ಹೇಳಬರುವುದಿಲ್ಲವಾದ್ದರಿಂದ, ಅವರವರ ಸೌಂದರ್ಯ ಮಟ್ಟವನ್ನಾಧರಿಸಿ (ಅವರು ಎಷ್ಟು ಬಾರಿ ಯಾವ ಯಾವ ಸ್ಪರ್ಧೆಗಳಲ್ಲಿ ಗೆದ್ದಿದ್ದಾರೆ ಮುಂತಾದ ಅಂಶಗಳನ್ನಾಧರಿಸಿ) ಅಷ್ಟಷ್ಟು ಹೆಚ್ಚು ಅಧಿಕಾರಯುತ ಸ್ಥಾನಗಳಿಗೆ ಪ್ರೊಮೋಟ್ ಮಾಡುವ ಮೂಲಕ ಒಂದೇ ಏಟಿಗೆ ಎರಡು ಹಕ್ಕಿ ಹೊಡೆದಂತೆ ಸುಂದರಿಯರಿಗೆ ಯಾವುದೇ ಕಿರುಕುಳಗಳಿರದಂತೆ ನೋಡಿಕೊಳ್ಳಲು ಸಾಧ್ಯವಾಗುವುದರ ಜೊತೆಗೆ ಅತ್ಯಂತ ವಿಧೇಯ ನೌಕರರನ್ನು ಕಛೇರಿಗಳಲ್ಲಿ ಕಾಣುವಂತಾಗಬಹುದು. ಈಗಿರುವಂತೆ ನೌಕರರ ಧರಣೆ, ಸತ್ಯಾಗ್ರಹ, ಅಧಿಕಾರಿಗಳಿಗೆ ಘೇರಾವ್, ಬಂದ್, ಲಾಠಿ ಛಾರ್ಜು ಮುಂತಾದ ಸುದ್ದಿಗಳು ಪತ್ರಿಕೆಗಳ ಮುಖ ಪುಟಗಳಲ್ಲಿ ಕಾಣೆಯಾಗಿ, ವರ್ಷವಿಡೀ ಕಛೇರಿಗಳು ತೆರೆದಿರುವಂತೆ (ರಜಾ ದಿನಗಳಲ್ಲೂ!) ನೋಡಿಕೊಳ್ಳಬಹುದು. ಮಾತ್ರವಲ್ಲ, ಸರಕಾರಕ್ಕೆ ಪ್ರತಿ ವರ್ಷ ಕೇಂದ್ರದ ಬಜೆಟ್ ಮಂಡನೆ ಆಗುತ್ತಿದ್ದಂತೆ ತನ್ನ ಬೊಕ್ಕಸಕ್ಕೆ ಏಟು ಬೀಳುವುದು ತಪ್ಪಿ, ನೌಕರರು ಸರಕಾರಕ್ಕೆ ಬಯ್ಯುವುದೂ ತಪ್ಪಬಹುದು. ಸುಂದರಿಯರ ಸೌಂದರ್ಯದ ಕಂಪು ನೌಕರರಿಗೆ ಮತ್ತೇರಿಸಿ ಅವರ ಸಮಸ್ಯೆಗಳೆಲ್ಲವನ್ನೂ ಮರೆಸಿ, ತಮಗೆ ಅಂಥ ಅವಕಾಶ ನೀಡಿದ ಸರಕಾರಕ್ಕೆ ಚಿರಋಣಿಯಾಗಿರುವುದಷ್ಟೇ ಅಲ್ಲ, ಅದು ಏನೇ ಮಾಡಿದರೂ ಬಾಯಿ ಮುಚ್ಚಿಕೊಂಡಿರುವಷ್ಟು ತಾಳ್ಮೆ ಹೆಚ್ಚಿ ಆ ಸರಕಾರ ಸ್ಟೇಬಲ್ ಆಗಿರುವಂತೆ ನೋಡಿಕೊಳ್ಳಬಹುದು!!

ಹೀಗೆ ಸೌಂದರ್ಯ ಸ್ಪರ್ಧೆಗಳಿಂದಾಗುವ ಪ್ರಯೋಜನಗಳ ಪಟ್ಟಿಯನ್ನೇ ಮಾಡುತ್ತಾ ಹೋದರೆ ಅದು ಹನುಮಂತನ ಬಾಲದಂತೆ ಬೆಳೆಯುತ್ತಲೇ ಹೋಗಬಹುದು.

ಕೊನೆಯದಾಗಿ, ಸೌಂದರ್ಯ ಸ್ಪರ್ಧಾ ವ್ಯವಸ್ಥಾಪಕರಲ್ಲಿ ಅದರಲ್ಲೂ 'ಸೇವೆಗಾಗಿ ಸೌಂದರ್ಯ' ಎಂಬ ತತ್ವರೂಪ ದರ್ಶನ ಮಾಡಿಸಿದ, ಒಂದು ಮಹೋನ್ನತ ಧ್ಯೇಯವನ್ನು ಜನತೆಯ ಮುಂದಿಟ್ಟಿರುವವರಲ್ಲಿ ನನ್ನದೊಂದು ನಮ್ರ ಸಲಹೆ. ಕೆಲಸಕ್ಕೆ ಬಾರದ ಹಿರಿ-ಕಿರಿ ತಲೆಗಳ, ಧರ್ಮಬೀರು (ಬ್ರಾಂದಿಗಳ), ಸಮಾನತೆಯ ಮತ್ತಿನಲ್ಲಿ ಬಡಬಡಿಸುವ ಹೆಂಗಳೆಯರ ಕೆರಳಿಕೆ, ಬೆದರಿಕೆಗಳಿಂದ ಗೊಂದಲಕ್ಕೀಡಾಗದೆ 'ವಜ್ರಾದಪಿ ಕಠೋರಾನಿ' ಎಂಬ ಉಕ್ತಿಯಂತೆ ನಿಶ್ಚಲ ಚಿತ್ತರಾಗಿ - ಜಗ್ಗದೆ-ಕುಗ್ಗದೆ, ಹೆದರದೆ-ಬೆದರದೆ - ತಮ್ಮ ಸೇವಾ ಮಾರ್ಗದಲ್ಲಿ ಇಟ್ಟ ಹೆಜ್ಜೆ ಹಿಂದೆಗೆಯದೆ ಜನತಾ ಕಲ್ಯಾಣ ಮುಂದುವರೆಸಬೇಕು. ಇದಕ್ಕಾಗಿ ಇಂದೇ ಏಕೆ? ಮುಂದೆಂದೂ ಹೆಂಗಳೆಯರ ಸೌಂದರ್ಯ ತಮ್ಮ ಸೇವೆಗೇ ಮೀಸಲಿರುತ್ತದೆಂಬುದರ ಬಗ್ಗೆ ಸಂಶಯ ಬೇಡ. ಸೌಂದರ್ಯವನ್ನು ಸೇವೆಗಾಗಿ ಬಳಸಿಕೊಳ್ಳುವಲ್ಲಿ ಸಂಕೋಚ, ಹಿಂಜರಿಕೆ ಬೇಡ, ಇನ್ನು ಮುಂದೆ ಇನ್ನಷ್ಟು ಲಕ್ಷ ಮಂದಿಗೆ ನೀವು 'ಸೇ(ಶೇ)ವೆ ಮಾಡಲು ಸಿದ್ಧರಿದ್ದರೆ, ಅಂಥ ಪವಿತ್ರ ಕೆಲಸಕ್ಕಾಗಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೆಣ್ಣು ಮಕ್ಕಳಿಂದ ಕ್ಯಾಬರೆ ನೃತ್ಯ ಏರ್ಪಡಿಸಬಹುದು! ಆಗ ಇನ್ನೂ ಹೆಚ್ಚು ಪ್ರತಿಭಟನೆಗಳು ಬರಬಹುದು. ಅವಕ್ಕೆಲ್ಲಾ ಸೊಪ್ಪು ಹಾಕದೆ ನಿಶ್ಚಲಚಿತ್ತದಿಂದ ಮುಂದುವರೆದಲ್ಲಿ ಈಗ ಸಂಗ್ರಹವಾದ ಹಣದ ಹತ್ತುಪಟ್ಟು ಸಂಗ್ರಹವಾಗುವುದು ನಿಸ್ಸಂಶಯ! ಸೇವೆ ಎಂದ ಮೇಲೆ ಹೆಂಗಳೆಯರು ಹಿಂಜರಿಯುತ್ತಾರೆಯೆ? ಅವರು ಹುಟ್ಟುವುದೇ ಇತರರ ಸೇವೆಗೆಂದಲ್ಲವೆ? ಅಂದ ಮೇಲೆ ಕುಣಿಯುವವರಿದ್ದರೆಂದ ಮೇಲೆ ನೋಡುವವರು ಕಿಕ್ಕಿರಿದು ನೆರೆದಾರು! ಆಗ ಈಗಿನಂತೆ ಬಯಲುರಂಗ ಮಂದಿರವೊಂದೇ ಸಾಲದಾಗಿ ಇಡೀ ಗಂಗೋತ್ರಿಯ ಆವರಣವೇ ಬೇಕಾಗಬಹುದು. ಇಲ್ಲಿರುವ ಮರ ಗಿಡಗಳು, ಸುಂದರ ಕಟ್ಟಡಗಳೇ ಆಸನಗಳಂತಾಗಿ ಆಸನಗಳ ಕೊರತೆಯನ್ನು ನೀಗಬಹುದು! ಇಲ್ಲಿನ ವಿದ್ಯಾರ್ಥಿ ವೃಂದಕ್ಕಂತೂ ಸ್ವರ್ಗಕ್ಕೆ ಮೂರೇ ಗೇಣು ಉಳಿಯಬಹುದು! ಇದರಿಂದ ಸೇವಾಧುರೀಣರ ಯೋಜಿತ ಸೇವೆ ಸತತವಾಗಿ ಅಡೆತಡೆಯಿಲ್ಲದೆ ಮುಂದುವರೆದು, ಜನತೆ ಸುಖ-ಸಂತೋಷಗಳನ್ನು ಕಾಣುವಂತಾಗಿ ಇತರ ಪ್ರದೇಶದವರಿಂದ ನಿಮ್ಮಂಥ ಸೇವಾಸಕ್ತರಿಗೆ ಹೆಚ್ಚಿನ ಬೇಡಿಕೆ ಬರುವುದು ಮಾತ್ರವಲ್ಲ, ರಾಷ್ಟ್ರಪ್ರಶಸ್ತಿಗಳೂ ನಿಮ್ಮತ್ತ ಧಾವಿಸಿ ಬರುವುದರಲ್ಲಿ ಸಂದೇಹವಿಲ್ಲ! ಯುವ ಜನರಲ್ಲಿ ಸೌಂದರ್ಯಪ್ರಜ್ಞೆ ಹಾಗೂ ಸೆಕ್ಯುಲರಿಸಂ ಬೆಳೆಸುತ್ತಿರುವುದರ ಜೊತೆಗೆ ಮಹಿಳೆಯರ ಸ್ಥಾನಮಾನಗಳನ್ನು ಉತ್ತಮಪಡಿಸುವತ್ತ ಹಗಲಿರುಳು ಶ್ರಮಿಸುವ ನಿಮಗಲ್ಲದೆ 'ಭಾರತರತ್ನದಂಥ ಪ್ರಶಸ್ತಿಗಳು ಇನ್ನಾರಿಗೆ ಸಲ್ಲಬೇಕು?!!

ಒಟ್ಟಿನಲ್ಲಿ ಸೌಂದರ್ಯಪ್ರಜ್ಞೆಯ ಸಂಕೇತವಾದ, ಮಹಿಳಾ ವಿಮೋಚನೆಗೆ ಹೆದ್ದಾರಿಯಾದ ಇಂಥ ಸ್ಪರ್ಧೆಗಳು ಹೆಚ್ಚು ಹೆಚ್ಚಾಗಿ ಎಲ್ಲೆಲ್ಲೂ ನಡೆಯುವಂತಾಗಲಿ; ಪೋಲೀಸ್ ಅಭಯಹಸ್ತ ಎಂದೆಂದಿಗೂ ಸೇವಾಧುರೀಣರಿಗೆ ಶ್ರೀರಕ್ಷೆಯಾಗಿರಲಿ; 'ಕುರೂಪಿ'ಗಳು, ಪ್ಯೂರಿಟನ್ನರು, ಫಂಡಮೆಂಟಲಿಸ್ಟರ ಅಪಸ್ವರಗಳು ಅಲ್ಲಲ್ಲಿಯೇ ಅಡಗಿ ಹೋಗಲಿ; ಪೋಲೀಸ್ ಲಾಠಿಗಳು ಅವರ ಮೈಗಳನ್ನು ಮುತ್ತಿಟ್ಟು ಬಾಸುಂಡೆಗಳೇಳಲಿ; ಸುಂದರಿಯರ ಶಾಪ ತಗಲಿ ಅವರ ಹುಟ್ಟಡಗಲಿ! ಸೌಂದರ್ಯ ಪ್ರಜ್ಞೆ ಹೀಗೇ ಬೆಳೆದು ಉತ್ತುಂಗ ಶಿಖರವೇರಲಿ! ಕನ್ನಡ ನಾಡು ಸುಂದರಿಯರ ನಾಡಾಗಲಿ!

ಹೆಣ್ಣಿನ ಸೌಂದರ್ಯಕ್ಕೆ ಜಯವಾಗಲಿ
ಸೇವೆಗಾಗಿ ಸೌಂದರ್ಯಕ್ಕೆ ಜಯವಾಗಲಿ

ವೆಂ. ವನಜ

*[ಕೆಲ ವರ್ಷಗಳ ಹಿಂದೆ ಮೈಸೂರಿನ ಗಂಗೋತ್ರಿಯಲ್ಲಿ ಸೌಂದರ್ಯ ಸ್ಪರ್ಧೆ ನಡೆದಾಗ ತೀವ್ರ ಪ್ರತಿರೋಧ ಕಂಡುಬಂದಿತ್ತು. ಆ ಸಂದರ್ಭದಲ್ಲಿ ವನಜಾರವರು ಬರೆದ ಈ ಅಣಕು ಬರಹ ಈಗಲೂ ಪ್ರಸ್ತುತವೆನಿಸಿದ ಕಾರಣ ಅದನ್ನು ಪ್ರಕಟಿಸಿದ್ದೇವೆ.]*

ಸ್ತ್ರೀಯರ ಸೌಂದರ್ಯವನ್ನು ಅಳೆಯುವ ವ್ಯಾಪಾರ ದುರಂತಮಯವಾದದ್ದು. ಇದು ಕೇವಲ ಮಾಂಸದ ಪೊಟ್ಟಣಗಳ ಸ್ಪರ್ಧೆ.

ನಳಿನಿ ಸಿಂಗ್

ಸೌಂದರ್ಯ ಸ್ಪರ್ಧೆಗಳು ಸ್ತ್ರೀಯರ ದೈಹಿಕ ರಚನೆಯೇ ಪ್ರಮುಖವಾದುದೆಂಬ ವಾದವನ್ನು ಸಮರ್ಥಿಸುತ್ತದೆ. ಶತಮಾನಗಳಿಂದ ಸ್ತ್ರೀಯರನ್ನು ತುಳಿಸುತ್ತಿರುವುದರ ಸಂಕೇತವಾಗಿದೆ.

ರುಕ್ಮಿಣಿ ರಾವ್, ಸಹೇಲಿ

REGD NO. KRNA 27

***ಈ ಸಂಚಿಕೆಗೆ ಆಕರಗಳು***

1) ಫ್ಯಾಕ್ಟ್ಸ್ ಎಗೇನೆಸ್ಟ್ ಮಿಥ್ಸ್ - ಭಾಗ I & II, ಜುಲೈ ಆಗಸ್ಟ್ - 1995

2) ಬ್ಯೂಟಿ ಕಂಟೆಸ್ಟ್ಸ್ : ದ ಮಿಥ್, ಮಿಸ್ಟಿಕ್ ಅಂಡ್ ದ ಕಲ್ಟ್ - ಬೈಲಾಂಚೋ ಮಂಚ್, ಗೋವಾ.

3) ದಿನಪತ್ರಿಕೆಗಳು ಮತ್ತು ನಿಯತಕಾಲಿಕೆಗಳು


ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067